

# ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೧೩-೧೪ನೇ ಸಾಲಿನಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ

# "ವಚನ ಸಾಹಿತ್ಯಕ್ಕೆ ದೇಜಗೌ ಅವರ ಕೊಡುಗೆ"


ನಿಬಂಧಕಾರರು

**ಶೈಲ.ಎಚ್.ಬಿ**

ನೋಂದಣಿ ಸಂಖ್ಯೆ – KVTMKS - 00669
ಕನ್ನಡ ಎಂ.ಫಿಲ್ ವಿದ್ಯಾರ್ಥಿನಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎಚ್.ಪಿ.ಗೀತಾ**

ಕನ್ನಡ ಸಹ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕುವೆಂಪುನಗರ, ಮೈಸೂರು





**ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್**
**ಜಯಲಕ್ಷ್ಮೀಪುರಂ, ಮೈಸೂರು**

೨೦೧೩-೧೪

1125



# ಕನ್ನಡ ವಿಶ್ವವಿದ್ಯಾಲಯ
# ಹಂಪಿ

೨೦೧೩-೧೪ನೇ ಸಾಲಿನಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ

# "ವಚನ ಸಾಹಿತ್ಯಕ್ಕೆ ದೇಜಗೌ ಅವರ ಕೊಡುಗೆ"


ನಿಬಂಧಕಾರರು

**ಶೈಲ.ಎಚ್.ಬಿ**

ನೋಂದಣಿ ಸಂಖ್ಯೆ – KVTMKS - 00669
ಕನ್ನಡ ಎಂ.ಫಿಲ್ ವಿದ್ಯಾರ್ಥಿನಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎಚ್.ಪಿ.ಗೀತಾ**

ಕನ್ನಡ ಸಹ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕುವೆಂಪುನಗರ, ಮೈಸೂರು



**ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್**
**ಜಯಲಕ್ಷ್ಮೀಪುರಂ, ಮೈಸೂರು**

೨೦೧೩-೧೪

## ಮಾರ್ಗದರ್ಶಕರ ಪ್ರಮಾಣಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಯ ವಿದ್ಯಾರ್ಥಿನಿಯಾದ **ಶ್ರೀಮತಿ ಶೈಲ.ಎಚ್.ಬಿ** ಅವರು ನನ್ನ ಮಾರ್ಗದರ್ಶನದಲ್ಲಿ **"ವಚನ ಸಾಹಿತ್ಯಕ್ಕೆ ದೇಜಗೌ ಅವರ ಕೊಡುಗೆ"** ಎಂಬ ಶೀರ್ಷಿಕೆಯ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾಲಯಗಳ ಪದವಿ ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಯಾವ ವಿಶ್ವವಿದ್ಯಾಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಗೀತಾ ಎಚ್.ಪಿ.

ಮೈಸೂರು
ದಿನಾಂಕ: ೨೪-೦೬-೨೦೧೪

**(ಡಾ. ಎಚ್.ಪಿ.ಗೀತಾ)**
ಮಾರ್ಗದರ್ಶಕರು
ಕನ್ನಡ ಸಹ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮದರ್ಜೆ ಕಾಲೇಜು
ಕುವೆಂಪುನಗರ, ಮೈಸೂರು

# ಅಭ್ಯರ್ಥಿಯ ಘೋಷಣಾ ಪತ್ರ

**ಡಾ. ಎಚ್.ಪಿ.ಗೀತಾ, ಸಹ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮದರ್ಜೆ ಕಾಲೇಜು, ಕುವೆಂಪು ನಗರ, ಮೈಸೂರು** ಇವರ ಮಾರ್ಗದರ್ಶನದಲ್ಲಿ **"ವಚನ ಸಾಹಿತ್ಯಕ್ಕೆ ದೇಜಗೌ ಅವರ ಕೊಡುಗೆ"** ಎಂಬ ವಿಷಯದ ಬಗೆಗೆ ಸಂಶೋಧನೆ ನಡೆಸಿ ನಿಬಂಧವನ್ನು ಸಿದ್ಧಪಡಿಸಲಾಗಿದೆ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾಲಯಗಳ ಪದವಿ, ಡಿಪ್ಲೊಮೋ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮೈಸೂರು
ದಿನಾಂಕ: ೨೪-೦೬-೨೦೧೪

(ಶೈಲ .ಎಚ್.ಬಿ)
೨೦೧೩-೧೪ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಪರಿವಿಡಿ

## “ವಚನ ಸಾಹಿತ್ಯಕ್ಕೆ ದೇಜಗೌ ಅವರ ಕೊಡುಗೆ”



* * * * *

# ಅಧ್ಯಾಯ – ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು, ವೈಶಿಷ್ಟ್ಯತೆಯನ್ನು, ಪೂರ್ವ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಹೀಗೆ ವಿಭಾಗ ಮಾಡಿ ಅಧ್ಯಯನ ಮಾಡಿಕೊಳ್ಳುವುದರ ಮೂಲಕ ಅರ್ಥೈಸಿಕೊಳ್ಳಬಹುದಾಗಿದೆ. ಒಂದೊಂದು ಕಾಲಘಟ್ಟದಲ್ಲಿಯೂ ಕನ್ನಡ ಸಾಹಿತ್ಯವು ವಿಭಿನ್ನವೂ. ವಿಶಿಷ್ಟವೂ ಆಗಿದೆ ಎಂದು ತಿಳಿಯಬಹುದಾಗಿದೆ. ಇದಕ್ಕೆ ಭಾಷೆ, ಸಾಮಾಜಿಕ ವ್ಯವಸ್ಥೆ ಇನ್ನೂ ಅನೇಕ ಅಂಶಗಳು ಕಾರಣವಾಗಿರಬಹುದು. ಸು. ೧೦ನೆಯ ಶತಮಾನದವರೆಗಿನ ಸಾಹಿತ್ಯಕ್ಕಿಂತ ೧೨ನೆಯ ಶತಮಾನದ ಸಾಹಿತ್ಯ ಹೇಗೆ ಭಿನ್ನವಾಗಿತ್ತು? ಆಗಿನ ಸಾಮಾಜಿಕ ಪರಿಸ್ಥಿತಿ ಹೇಗಿತ್ತು? ಕನ್ನಡ ಸಾಹಿತ್ಯಕ್ಕೆ ೧೨ನೆಯ ಶತಮಾನದ ಕೊಡುಗೆ ಏನೆಂಬುದನ್ನು ತಿಳಿದುಕೊಳ್ಳುವುದು ಮುಖ್ಯ ಉದ್ದೇಶವಾಗಿದೆ.

೧೨ನೆಯ ಶತಮಾನದಿಂದ ೨೧ನೆಯ ಶತಮಾನದವರೆಗೂ ಚರ್ಚೆಗೆ ಒಳಗಾಗುತ್ತಿರುವ ವಚನಗಳು ಎಷ್ಟೆಲ್ಲಾ ಅರ್ಥಪೂರ್ಣವಾಗಿದ್ದವು. ಹೇಗೆ ಸಾಮಾಜಿಕ ಕಳಕಳಿಯನ್ನು ಹೊಂದಿದ್ದವು. ವಚನಕಾರರ ಹೋರಾಟದ ರೀತಿ ಹೇಗಿತ್ತು? ಉದ್ದೇಶಗಳು ಯಾವುವು? ಎಂಬುದನ್ನು ನಾಡಿನ ಪ್ರಸಿದ್ಧ ಲೇಖಕರಾದ ದೇಜಗೌ ಅವರ ಕೃತಿಗಳಿಂದ ಅರ್ಥೈಸಿಕೊಳ್ಳಲು ಸಾಧ್ಯವಾಗಿದೆ. ಎಷ್ಟೆಷ್ಟು ಚರ್ಚೆಗಳಿಗೆ ಒಳಗಾಗುತ್ತಿದೆಯೋ ಅಷ್ಟಷ್ಟು ಉಪಯುಕ್ತ ಅಂಶಗಳು ವಚನ ಸಾಹಿತ್ಯದಿಂದ ಹೊರಹೊಮ್ಮುತ್ತಿವೆ.

ಎಂ.ಫಿಲ್. ಪದವಿಗಾಗಿ ನಿಬಂಧ ರಚನೆ ಮಾಡಲು "ವಚನ ಸಾಹಿತ್ಯಕ್ಕೆ ದೇಜಗೌ ಕೊಡುಗೆ" ಎಂಬ ವಿಷಯವನ್ನು ಆಯ್ಕೆಮಾಡಿಕೊಂಡಿರುವುದು ನನಗೆ ವಚನ ಸಾಹಿತ್ಯದ ಬಗ್ಗೆ ಹೆಚ್ಚು ಅಧ್ಯಯನ ಮಾಡಲು ಸಹಕಾರಿಯಾಗಿದೆ. ಪ್ರಸ್ತುತ ವಿಷಯವು ಪಿಎಚ್.ಡಿ. ಪ್ರಬಂಧಕ್ಕೆ ಸಲ್ಲುವಷ್ಟು ವಿಷಯವನ್ನು ಹೊಂದಿದೆ. ಅದರ ವ್ಯಾಪ್ತಿ ಅಷ್ಟು ವಿಶಾಲವಾಗಿದೆ. ದೊರಕಿರುವ ಅಲ್ಪ ಸಮಯದಲ್ಲಿಯೇ ಈ ವಿಷಯದ ಬಗ್ಗೆ ಸಮರ್ಪಕವಾಗಿ ವಿಷಯ ನಿರೂಪಿಸುವ ಪ್ರಯತ್ನ ಮಾಡಿರುತ್ತೇನೆ.

ವಿಶ್ವವ್ಯಾಪಿಯಾದ ವಚನ ಸಾಹಿತ್ಯ ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಎಲ್ಲಾ ಕ್ಷೇತ್ರದಲ್ಲಿಯೂ ತನ್ನದೇ ಆದ ಕೊಡುಗೆಯನ್ನು ನೀಡಿದೆ. ವಚನ ಸಾಹಿತ್ಯವು ಪ್ರಾಚೀನ ಸಾಹಿತ್ಯಕ್ಕಿಂತ ಹೇಗೆ ವಿಶಿಷ್ಟವಾಗಿದೆ, ಇಡೀ ಪ್ರಪಂಚಕ್ಕೆ ಹೇಗೆ ಮಾದರಿಯಾಗಿದೆ ಎಂಬ ವಿಷಯಗಳನ್ನು ದೇಜಗೌ ಅವರು ವಚನ

ಸಾಹಿತ್ಯ ಕುರಿತು ರಚಿಸಿರುವ ಕೃತಿಗಳ ಮೂಲಕ ನನ್ನ ಗ್ರಹಿಕೆಗೆ ತಕ್ಕಂತೆ ಸಂಶೋಧನೆ ಮಾಡುತ್ತಿದ್ದೇನೆ.

ಸಾರ್ವಕಾಲಿಕವೂ, ಸರ್ವ ಆದರಣೀಯವೂ ಆದ ವಚನಗಳು ಜಾತಿಮತಗಳನ್ನು ಮೀರಿ ಬೆಳೆದ ಸಾಹಿತ್ಯವಾಗಿದೆ. ಜನಸಾಮಾನ್ಯರ ದನಿಯಾಗಿದೆ. ತಮ್ಮ ಭಾವನೆಗಳನ್ನು, ಮಾನಸಿಕ ಒಳತೋಟಿಗಳನ್ನು, ಭೇದಭಾವಗಳನ್ನು ಅಭಿವ್ಯಕ್ತಿಸುವ ಸ್ವಾತಂತ್ರ್ಯ ಈ ಯುಗದಲ್ಲಿ ಲಭಿಸಿತು. ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ ಮೊದಲಾದವರಿಂದ ಹಿಡಿದು ಕೆಳವರ್ಗದ ಕಕ್ಕಯ್ಯ, ಚೆನ್ನಯ್ಯ ಮೊದಲಾದವರು ಸಹ ವಚನಗಳನ್ನು ರಚನೆಮಾಡಿದುದು ಅಸಾಮಾನ್ಯ ಸಾಧನೆಯೇ ಆಗಿದೆ. ಏಕೆಂದರೆ ಸಾಮಾಜಿಕ ಅಸಮಾನತೆ ಇದ್ದ ಸಮಾಜದಲ್ಲಿ ಕೆಳವರ್ಗದವರಿಗೆ ಸಾಹಿತ್ಯ ರಚಿಸುವ ಅವಕಾಶ ದೊರೆತದ್ದೆ ಒಂದು ಅಪೂರ್ವ ಸಾಧನೆ.

ಹೊನ್ನು ಮಾಯೆಯೆಂಬರು, ಹೊನ್ನುಮಾಯೆಯಲ್ಲ,
ಹೆಣ್ಣುಮಾಯೆಯೆಂಬರು, ಹೆಣ್ಣುಮಾಯೆಯಲ್ಲ,
ಮಣ್ಣುಮಾಯೆಯೆಂಬರು, ಮಣ್ಣುಮಾಯೆಯಲ್ಲ,
ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರಾ

ಅಲ್ಲಮ ಪ್ರಭುವಿನ ಈ ವಚನದಿಂದಲೇ ನಮಗೆ ವೇದ್ಯವಾಗುತ್ತದೆ. ಮನುಷ್ಯನ ಮಾನಸಿಕ ದೌರ್ಬಲ್ಯಕ್ಕೆ ಆಸೆಯೆಂಬುದು ಹೇಗೆ ಕಾರಣವಾಗುತ್ತದೆ. ಈ ಅಂಶವನ್ನು ಯಾವುದೇ ಧಾರ್ಮಿಕ ಗ್ರಂಥಗಳನ್ನು ಓದಿಯೇ ತಿಳಿಯಬೇಕಿಲ್ಲ. ನಮ್ಮ ವಚನಕಾರರೇ ತುಂಬಾ ಸರಳವಾಗಿ, ಸುಲಭವಾಗಿ ತಿಳಿಸಿಕೊಡುತ್ತಾರೆ. ಇಂತಹ ಅನೇಕ ವಚನಗಳು ಸ್ವವಿಮರ್ಶೆಗೆ ಹಚ್ಚುತ್ತವೆ. ಇಂದೂ ಕೂಡ ಹೊನ್ನು, ಮಣ್ಣು, ಹೆಣ್ಣಿಗಾಗಿ ನಡೆಯುತ್ತಿರುವ ಕದನ, ಕೋಲಾಹಲಗಳು ಎಷ್ಟೆಲ್ಲಾ ದುರಂತಕ್ಕೆ ಸಾಕ್ಷಿಯಾಗುತ್ತಿವೆ ಎಂಬುದನ್ನು ಸೂಚ್ಯವಾಗಿ ತಿಳಿಸುತ್ತವೆ. ನೈತಿಕತೆಯೇ ಮರೆಯಾಗುತ್ತಿರುವ ಮನುಷ್ಯರಲ್ಲಿರುವ ಅತಿಯಾಸೆ ತಮ್ಮ ನಾಶಕ್ಕೆ ಕಾರಣವಾಗುತ್ತಿದೆ ಎಂಬ ಅರಿವು ಇಲ್ಲದೇ ಬದುಕುತ್ತಿದ್ದೇವೆ.

ಕಾಯಕ ಪ್ರಧಾನವಾದ ಜೀವನಶೈಲಿ ವಚನಕಾರರದಾಗಿತ್ತು. ಸಮಾಜದ ಕಟ್ಟಕಡೆಯವರ್ಗಕ್ಕೆ ಸೇರಿದ ಮನುಷ್ಯನು ಕೂಡ ತಾನು ಮಾಡುವ ಕೆಲಸದಲ್ಲಿಯೇ ಕೈಲಾಸವನ್ನು ಕಾಣುತ್ತಿದ್ದ. ಆದರೆ ಇಂದು ಆ ರೀತಿ ಕೆಲಸಮಾಡುವುದನ್ನು ಕಲ್ಪಿಸಿಕೊಳ್ಳುವುದೇ ಕಷ್ಟವಾಗಿದೆ. ಕೆಲಸದ ಬಗೆಗೆ ಇರುವ ಕಾಳಜಿ, ಶ್ರದ್ಧೆಗಿಂತ ಅನಾವಶ್ಯಕವಾದ ಕೆಲಸಗಳಲ್ಲಿ ತೊಡಗಿಸಿಕೊಳ್ಳುವುದೇ ಹೆಚ್ಚಾಗಿದೆ.

ವಚನಸಾಹಿತ್ಯ ಕುರಿತಾದ ದೇಜಗೌ ಅವರ ವಿಚಾರಗಳು ಓದುಗರಲ್ಲಿ ವಿಚಾರಮಾಡುವ ಶಕ್ತಿಯನ್ನು ಮೂಡಿಸುತ್ತವೆ. ಕೇವಲ ವಚನಗಳನ್ನು ಓದುತ್ತಿದ್ದ, ಗಾಯನ ಮಾಡುತ್ತಿದ್ದ ನಮಗೆ ದೇಜಗೌ ಅವರು ವಚನಕಾರರೊಂದಿಗೆ ಎಲ್ಲಾ ಧರ್ಮದ ಮಹಾನ್ ಪುರುಷರ ಆದರ್ಶಗಳು, ಚಿಂತನೆಗಳನ್ನು ತೌಲನಿಕವಾಗಿ ತಿಳಿಸಿಕೊಡುತ್ತಾರೆ. ವಚನ ಸಾಹಿತ್ಯ ಕುರಿತು ದೇಜಗೌ ಅವರ ಅಭಿಪ್ರಾಯಗಳು ವಚನಗಳ ವ್ಯಾಪಕತೆಯನ್ನು ಇನ್ನಷ್ಟು ವಿಸ್ತಾರಗೊಳಿಸಿವೆ.

"ಬಸವೇಶ್ವರರಾದಿಯಾಗಿ ಶರಣರ ವಚನಗಳು ಅಂದಿಗೆ ಇಂದಿಗೆ ಎಂದೆಂದಿಗೂ ಪ್ರಸ್ತುತ; ದೇಶಕಾಲಾತೀತವಾದುವು. ಅವುಗಳನ್ನು ಅಧ್ಯಯನ ಮಾಡಿದಷ್ಟು ವಿನೂತನ ದರ್ಶನ ತತ್ವಚಿಂತನೆ ಅರ್ಥ ಆಶಯ ಸತ್ಯ ಹೊಳಹು ವಿಚಾರಗಳು ಮೊಗದೋರುತ್ತವೆ"[೧]

ಲೇಖಕರ ಈ ಅಭಿಪ್ರಾಯವು ಪ್ರತಿಯೊಬ್ಬರಲ್ಲೂ ಚರ್ಚೆ ಮಾಡುವ, ಉತ್ತರಕಂಡುಕೊಳ್ಳುವ, ಜಾಗೃತಿ ಮೂಡಿಸುವ ಶಕ್ತಿ ವಚನಗಳಿಗಿದೆ ಎಂಬ ವಿಚಾರ ಮನಸ್ಸಿನಲ್ಲಿ ಮೂಡುತ್ತದೆ. ಹೀಗಾಗಿ "ವಚನ ಸಾಹಿತ್ಯಕ್ಕೆ ದೇಜಗೌ ಅವರ ಕೊಡುಗೆ" ಎಂಬ ವಿಷಯವನ್ನು ಅಧ್ಯಯನದ ಅನುಕೂಲದ ದೃಷ್ಟಿಯಿಂದ ಪ್ರಸ್ತುತ ನಿಬಂಧದಲ್ಲಿ ೭ ಅಧ್ಯಾಯಗಳನ್ನಾಗಿ ಮಾಡಿಕೊಂಡಿರುತ್ತೇನೆ.

ವಚನ ಸಾಹಿತ್ಯದ ಬಗ್ಗೆ, ವಚನಕಾರರ ಬಗ್ಗೆ, ೧೨ನೆಯ ಶತಮಾನದಲ್ಲಾದ ಕ್ರಾಂತಿಕಾರಕ ಬದಲಾವಣೆಗಳ ಬಗ್ಗೆ ಈಗಾಗಲೇ ಸಾಕಷ್ಟು ತಲಸ್ಪರ್ಶಿ ಅಧ್ಯಯನ ನಡೆದಿದೆ. ನಾನು ನೇರವಾಗಿ ವಚನಸಾಹಿತ್ಯದ ಬಗ್ಗೆ ಸಂಶೋಧನೆ ಮಾಡದೆ ವಚನ ಸಾಹಿತ್ಯ ಮತ್ತು ಚಳುವಳಿಯನ್ನು ಬೇರೆ ಬೇರೆ ಆಯಾಮಗಳಲ್ಲಿ ಭಿನ್ನ ದೃಷ್ಟಿಕೋನಗಳಿಂದ ಅಧ್ಯಯನ ಮಾಡಿದ ದೇಜಗೌ ಅವರ ವಿಶಿಷ್ಟ ವಿಚಾರಧಾರೆಗಳನ್ನು ಕುರಿತಂತೆ ಈ ನಿಬಂಧದಲ್ಲಿ ಚರ್ಚಿಸಿರುತ್ತೇನೆ.

**ಅಧ್ಯಾಯಗಳು**

೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೨. ದೇಜಗೌ : ಬದುಕು – ಬರಹ

೩. ವಚನ ಸಾಹಿತ್ಯ – ಒಂದು ವಿಶ್ಲೇಷಣೆ

೪. ವಚನಗಳಲ್ಲಿ ಸಮಾಜವಾದ

೫. ದೇಜಗೌ : ಬುದ್ಧ, ಬಸವ, ಅಂಬೇಡ್ಕರ್

೬. ದೇಜಗೌ ಅವರ ಅಭಿಪ್ರಾಯದಂತೆ ವಿಶ್ವಸಂಸ್ಕೃತಿಗೆ ವಚನಯುಗದ ಕೊಡುಗೆ

೭. ಉಪಸಂಹಾರ

ಅಧ್ಯಾಯ – ೧ರಲ್ಲಿ ಅಧ್ಯಯನದ ಉದ್ದೇಶ ಮತ್ತು ವಿಷಯದ ವ್ಯಾಪ್ತಿಯನ್ನು ತಿಳಿಸಲಾಗಿದೆ.

ಅಧ್ಯಾಯ – ೨ರಲ್ಲಿ ದೇಜಗೌ ಅವರ ಬದುಕು, ಬರಹ, ಸಾಧನೆಗಳ ಕುರಿತು ತಿಳಿಸಲಾಗಿದೆ.

ಅಧ್ಯಾಯ – ೩ರಲ್ಲಿ ವಚನ ಸಾಹಿತ್ಯ – ಒಂದು ವಿಶ್ಲೇಷಣೆ ಎಂಬ ಶೀರ್ಷಿಕೆಯಲ್ಲಿ ವಚನ ಸಾಹಿತ್ಯದ ಮುನ್ನೋಟಕ್ಕೆ ಸಂಬಂಧಪಟ್ಟಂತ ವಿಷಯವನ್ನು ತಿಳಿಸುವ ಪ್ರಯತ್ನಮಾಡಿರುತ್ತೇನೆ.

ಅಧ್ಯಾಯ – ೪ರಲ್ಲಿ ವಚನಗಳಲ್ಲಿ ಸಮಾಜವಾದ ಬಗ್ಗೆ ದೇಜಗೌ ಅವರ ಅಭಿಪ್ರಾಯಗಳನ್ನು ಸಂಶೋಧಕಿಯಾಗಿ ಗ್ರಹಿಸಿ ವಿವರಿಸಿದ್ದೇನೆ.

ಅಧ್ಯಾಯ – ೫ರಲ್ಲಿ ದೇಜಗೌ ಅವರು ಕಂಡಂತೆ ಬುದ್ಧ, ಬಸವ, ಅಂಬೇಡ್ಕರ್ ಈ ಮೂವರು ಮಹಾನ್ ಮಾನವತಾವಾದಿಗಳ ವಿಚಾರಧಾರೆಗಳನ್ನು ದೇಜಗೌ ಅವರು ಹೇಗೆ ಕಂಡರಿಸಿದ್ದಾರೆ. ವಿಚಾರಗಳ ಸಾಮ್ಯತೆಗಳು – ಇವುಗಳನ್ನು ವಿವರಿಸಿರುವ ರೀತಿಯನ್ನು ವಿವರಿಸಲಾಗಿದೆ.

ಅಧ್ಯಾಯ – ೬ರಲ್ಲಿ ದೇಜಗೌ ಅವರ ಅಭಿಪ್ರಾಯದಂತೆ ಇಡೀ ವಿಶ್ವಸಂಸ್ಕೃತಿಗೆ ವಚನ ಸಾಹಿತ್ಯವು ನೀಡಿರುವ ಕೊಡುಗೆಯನ್ನು ಸಂಶೋಧಕಿಯಾಗಿ ಗ್ರಹಿಸಿರುವ ಅಂಶಗಳನ್ನು ವಿವರಿಸಲಾಗಿದೆ.

ಅಧ್ಯಾಯ – ೭ರಲ್ಲಿ ವಚನ ಸಾಹಿತ್ಯ ಕುರಿತ ದೇಜಗೌ ಅವರ ಕೊಡುಗೆಯನ್ನು ಸಂಶೋಧಕಿಯಾಗಿ ನಾನು ಗ್ರಹಿಸಿದ, ವಿಶ್ಲೇಷಿಸಿದ ಅಂಶಗಳನ್ನು ವಿವರಿಸಿದ್ದೇನೆ.

## ಕೊನೆಟಿಪ್ಪಣಿಗಳು

೧. ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ, ಲೇ: ದೇಜಗೌ, ಪುಟ. vii, ೨೦೦೪, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.

# ಅಧ್ಯಾಯ – ೨

## ದೇಜಗೌ : ಬದುಕು-ಬರಹ

"ಸ್ವಾತಂತ್ರ್ಯಪೂರ್ವದಲ್ಲಿ ಕನ್ನಡ ನಾಡುನುಡಿಯ ವಿಶ್ವಮಾನವತೆಯ ಹೊಸ ಆವಿಷ್ಕಾರಕ್ಕಾಗಿ ಅದು ಇಬ್ಬರು ಮಹಾನ್ ವ್ಯಕ್ತಿಗಳನ್ನು ಹೊಯ್‌ಕೈಯಾಗಿ ನಿಯೋಜಿಸಿತು. ಒಂದು ಶಕ್ತಿ ಮಲೆನಾಡಿನ ನಿಸರ್ಗ ಸೌಂದರ್ಯದ ರಮಣೀಯತೆಯಲ್ಲಿ ಜನಿಸಿದರೆ, ಮತ್ತೊಂದು ಶಕ್ತಿ ಬಯಲುನಾಡಿನ ಬಡತನದ ಬೇಗುದಿಯ ಗುಡಿಸಲಿನಲ್ಲಿ ಜನಿಸಿತು. ಅಂಥ ಎರಡು ಮಹಾನ್ ಚೇತನಗಳೇ ಕುವೆಂಪು ಮತ್ತು ದೇಜಗೌ"[೧]

ಲೇಖಕರ ಅಭಿಪ್ರಾಯದಂತೆ ಆಧುನಿಕ ಕನ್ನಡ ಸಾಹಿತ್ಯ ಲೋಕ ಕಂಡ ಶ್ರೇಷ್ಠ ವಿದ್ವಾಂಸ ದೇಜಗೌ ಅವರು. ಸಾಹಿತ್ಯ ಕ್ಷೇತ್ರದಲ್ಲಿ ಇತರರಿಗಿಂತ ಭಿನ್ನವಾಗಿ ಗುರುತಿಸಿಕೊಂಡವರು. ದೇಜಗೌ ಅವರು ಮಾರ್ಗದರ್ಶಿಯಾಗಿ, ಸ್ಫೂರ್ತಿದಾಯಕರಾಗಿ, ಆದರ್ಶಪ್ರಾಯರಾಗಿದ್ದಾರೆ.

ನಾಡಿನಾದ್ಯಂತ 'ದೇಜಗೌ' ಎಂದೇ ಪರಿಚಿತರಾಗಿರುವ ದೇವೇಗೌಡ ಜವರೇಗೌಡ ಅವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣ ತಾಲ್ಲೂಕಿನ ತಮ್ಮ ತಾಯಿಯ ತವರೂರಾದ ಮುದಿಗೆರೆಯಲ್ಲಿ ೬-೭-೧೯೧೮ರಲ್ಲಿ ಜನಿಸಿದರು. ತಂದೆ ದೇವೇಗೌಡರು, ತಾಯಿ ಚನ್ನಮ್ಮ, ತುಂಬಾ ಬಡತನದಲ್ಲಿ ಬಾಲ್ಯವನ್ನು ಕಳೆದ ದೇಜಗೌ ಅವರಿಗೆ ಶಿಕ್ಷಣ ಕೊಡಿಸುವಷ್ಟು ಆರ್ಥಿಕ ಶಕ್ತಿಯಿಲ್ಲದೆ ಆಡು ಕಾಯುವ ಕೆಲಸಕ್ಕೆ ಕಳುಹಿಸುತ್ತಾರೆ. ಆದರೆ ವಿದ್ಯೆ ಕಲಿಯುವ ಹಂಬಲದಿಂದ ತಮ್ಮ ತಂದೆ ವಹಿಸಿದ್ದ ಕೆಲಸದ ಕಡೆ ಅಷ್ಟಾಗಿ ಗಮನಕೊಡದೆ ಶಾಲೆಗೆ ಹೋಗುತ್ತಿರುತ್ತಾರೆ. ಇವರ ಓದುವ ಅದಮ್ಯ ಬಯಕೆಯನ್ನು ಕಂಡು ಶಾಲೆಯ ಮೇಷ್ಟ್ರಿಗೆ ಅಚ್ಚುಮೆಚ್ಚಾಗುತ್ತಾರೆ. ತಾನು ವಹಿಸಿದ ಕೆಲಸ ಬಿಟ್ಟು ಶಾಲೆಯ ಕಡೆಗಿರುವ ಗಮನವನ್ನು ಕಂಡು ಕೋಪಿಸಿಕೊಂಡ ದೇಜಗೌ ಅವರ ತಂದೆ 'ಬಡ್ಡಿಮಗನೆ ನಿನ್ನ ಇಸ್ಕೂಲಿಗೆ ಹೋಗು ಅಂದೋರು ಯಾರು" ಎನ್ನುತ್ತಾ ಹಿಪ್ಪನೇರಳೆ ಕಡ್ಡಿಯ ರುಚಿಯನ್ನು ತೋರಿಸಿದರು".[೨]

ಶಾಲೆಯ ಮೇಷ್ಟ್ರು ಎಚ್.ಕೆ. ವೀರಣ್ಣಗೌಡರು ದೇಜಗೌ ಅವರ ತಂದೆಗೆ ಮಗನ ಬಗ್ಗೆ, ವಿದ್ಯಾಭ್ಯಾಸದ ಬಗ್ಗೆ ತಿಳಿಹೇಳಿ ಅವನ ಬಟ್ಟೆ, ಪುಸ್ತಕದ ಖರ್ಚನ್ನು ತಾವೇ ವಹಿಸಿಕೊಳ್ಳುವುದಾಗಿ ಹೇಳುತ್ತಾರೆ. ಅವರ ಸಹಾಯ, ಸಹಕಾರದಿಂದ ದೇಜಗೌ ಅವರ ಶಿಕ್ಷಣ ಪಡೆಯಬೇಕೆಂಬ ಕನಸು ನನಸಾಗಿ. ಎಷ್ಟೆಲ್ಲಾ ಸಾಧನೆ ಮಾಡಲು

ಸ್ಫೂರ್ತಿಯಾಯಿತು. ಕಷ್ಟದಿಂದಲೇ ಪ್ರಾಥಮಿಕ, ಪ್ರೌಢಶಿಕ್ಷಣ ಪೂರೈಸಿದ ದೇಜಗೌ ಅವರು ಸ್ಕಾಲರ್‌ಶಿಪ್ ಹಣದಿಂದ ಓದನ್ನು ಮುಂದುವರೆಸುತ್ತಾರೆ. ಒಂದು ದಿನ ವಾಚನಾಲಯದಲ್ಲಿ "ಇಂಗ್ಲಿಷ್ ತ್ರೈಮಾಸಿಕ ತ್ರಿವೇಣಿ"ಯಲ್ಲಿ ಕುವೆಂಪು ಅವರ ಭಾವಚಿತ್ರವನ್ನು ನೋಡಿದ ದೇಜಗೌ ಅವರು ಕುವೆಂಪು ಅವರ ಬಗ್ಗೆ ವಿಶೇಷ ಅಭಿಮಾನವನ್ನು ಬೆಳೆಸಿಕೊಳ್ಳುತ್ತಾರೆ. ಅಂದು ಆರಂಭವಾದ ಅಭಿಮಾನ ಇಂದೂ ಕೂಡ ಅವರ ಜೀವನ ಶೈಲಿಯಲ್ಲಿ ಬೆರೆತುಹೋಗಿದೆ.

ಇಂಗ್ಲಿಷ್ ವಿಷಯವನ್ನು ಅಧ್ಯಯನ ಮಾಡಲು ಬಯಸಿದ್ದ ದೇಜಗೌ ಅವರಿಗೆ ಸಿಕ್ಕಿದ್ದು ಚರಿತ್ರೆ. ಆದರೆ ತೆಗೆದುಕೊಂಡದ್ದು ಕನ್ನಡ. ೧೯೩೮ರಲ್ಲಿ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಪದವಿಗೆ ಸೇರುತ್ತಾರೆ. ಉಳಿದುಕೊಳ್ಳಲು ರಾಮಕೃಷ್ಣಾಶ್ರಮವನ್ನು ಸೇರಿದರು. ವಿದ್ಯಾರ್ಥಿಯಾಗಿದ್ದಾಗಲೇ ಕುವೆಂಪು, ಬಿ.ಎಂ.ಶ್ರೀ, ತೀನಂಶ್ರೀ, ಡಿ.ಎಲ್.ಎನ್. ಮೊದಲಾದ ಸಾಹಿತ್ಯ ದಿಗ್ಗಜರು ದೇಜಗೌ ಅವರ ಮೇಲೆ ವಿಶೇಷ ಪ್ರಭಾವ ಬೀರಿದರು.

ಕನ್ನಡ ಓದಿ ಆನರ್ಸ್ ಪಡೆದರೂ ಅದಕ್ಕೆ ತಕ್ಕ ಉದ್ಯೋಗ ದೊರೆಯದೆ ಅನೇಕ ಪ್ರಯತ್ನಪಡುತ್ತಾರೆ. ನ್ಯಾಯಶಾಸ್ತ್ರ ಓದಲು ಕೊಲ್ಲಾಪುರಕ್ಕೆ ಹೋದ ಅವರು ತಡವಾಗಿ ಹೋದುದರಿಂದ ಅದು ಸಿಗದೆ ವಾಪಸ್ಸು ಬಂದದ್ದು ಕನ್ನಡ ಭಾಷೆಯನ್ನು ಉಳಿಸಿ ಬೆಳಸಿಲಿಕ್ಕಾಗಿಯೇ ಇರಬಹುದು. ಕಾನೂನು ವ್ಯಾಸಂಗ ದೊರೆತಿದ್ದರೆ ಅವರ ಆಸಕ್ತಿಯೇ ಬೇರೆಯಾಗುತ್ತಿದ್ದಿರಬಹುದು. ಆದರ್ಶಗಳನ್ನೇ ಬದುಕಿನಲ್ಲಿ ತುಂಬಿಕೊಂಡಿದ್ದ ದೇಜಗೌ ಅವರು ಕನ್ನಡ ಎಂ.ಎ.ಗೆ ಸೇರಿದರು.

ದೇಜಗೌ ಅವರು ಈ ಹಂತದಲ್ಲಿಯೇ ಚನ್ನಪಟ್ಟಣ ತಾಲ್ಲೂಕಿನ ತಿಮ್ಮಸಂದ್ರದ ಅಪ್ಪಾಜಿಗೌಡರ ಮಗಳು ಸಾವಿತ್ರಮ್ಮನವರೊಂದಿಗೆ ಸರಳ ವಿವಾಹವಾದರು. ಅವರ ಲಗ್ನಪತ್ರಿಕೆಯು ಈ ಪದ್ಯವನ್ನು ಒಳಗೊಂಡಿತ್ತು.

"ಒಲುಮೆಗಿಂತಲೂ ಬೇರೆ ಪರಮಾರ್ಥವಿಲ್ಲ ನರ ಬದುಕಿನಲ್ಲಿ, ಮೇಣ್ ಅರ್ಥ
ಹೀನಂ ಬಾಳ್ವೆ ಒಲುಮೆಯಿಲ್ಲದಿದ್ದರೆ, ಹೂವಿಂದ ಸಾರ್ಥಕವಹುದು. ಗಿಡದ
ಬಾಳಂತರಕೆ ಒಲುಮೆ ಹೂವು"[೩]

ಕುವೆಂಪು ಅವರ ಚಿತ್ರಾಂಗದ ಪದ್ಯ. ಪದ್ಯ ಒಳಗೊಂಡಿರುವ ಅರ್ಥದಂತೆ ಸಾರ್ಥಕ ದಾಂಪತ್ಯ ದೇಜಗೌ ಅವರದಾಗಿದೆ. ಅವರ ಸಾಧನೆಗೆ ಬೆನ್ನೆಲುಬಾಗಿ ಅವರ ಪತ್ನಿ ಸಾವಿತ್ರಮ್ಮ ಅವರ ಸಹಕಾರವಿದೆ. ವಿವಾಹವಾದ ನಂತರ ಉಪನ್ಯಾಸಕ ಹುದ್ದೆ,

ಸಬ್‌ರಿಜಿಸ್ಟರ್ ಹುದ್ದೆಗಳಿಗೆ ಏಕಕಾಲದಲ್ಲಿ ಆದೇಶಗಳು ಬಂದಾಗ ಇವರು ಆಯ್ದುಕೊಂಡದ್ದು ಉಪನ್ಯಾಸಕ ಹುದ್ದೆಯನ್ನು, ೧೯೩೯ರಲ್ಲಿ ಅವರು ಓದಿದ ಮಹಾರಾಜ ಕಾಲೇಜಿಗೆ ಅಧ್ಯಾಪಕರಾದರು. ಅಂದಿನಿಂದ ಅವರ ಸಾಹಿತ್ಯ ರಚನೆ ಆರಂಭವಾಯಿತು. ೧೯೪೯ರಲ್ಲಿ ಶ್ರೀಮತಿ ಕೃಷ್ಣಹಥೀಸಿಂಗರ "with No Regrets" ಕೃತಿಯ ಅನುವಾದ "ನೆನಪು ಕಹಿಯಲ್ಲ" ಪುಸ್ತಕ ಪ್ರಕಟಿಸುವುದರೊಂದಿಗೆ ಆರಂಭವಾದ ಸಾಹಿತ್ಯ ರಚನೆ ಶತಮಾನದ ಹೊಸ್ತಿಲಲ್ಲಿರುವ ಅವರ ಉತ್ಸಾಹ ಬತ್ತಲಾರದ ಚಿಲುಮೆಯಾಗಿದೆ.

೧೯೫೫ರಿಂದ ಪ್ರಾಧ್ಯಾಪಕರಾಗಿ, ಪ್ರಸಾರಾಂಗದ ಕಾರ್ಯದರ್ಶಿಯಾಗಿ, ಪರೀಕ್ಷಾಧಿಕಾರಿಯಾಗಿ, ನಿರ್ದೇಶಕರಾಗಿ, ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ ಸೇವೆ ಸಲ್ಲಿಸಿದ ಇವರು ನಿವೃತ್ತಿಯ ನಂತರವೂ ನಾಡುನುಡಿಯ ಬಗ್ಗೆ ಸಲ್ಲಿಸುತ್ತಿರುವ ಸೇವೆ ಸ್ಮರಣೀಯವಾಗಿದೆ.

ದೇಜಗೌ ಅವರ ವಾಙ್ಮಯ ಸಂಪತ್ತು ಅಪಾರವಾದುದು. ವಿಮರ್ಶೆ, ಅನುವಾದ, ಜೀವನ ಚರಿತ್ರೆ, ಗ್ರಂಥಸಂಪಾದನೆ, ಪ್ರವಾಸ ಕಥನ ಹೀಗೆ ಹತ್ತು ಹಲವು ಪ್ರಕಾರಗಳಲ್ಲಿ ತಮ್ಮದೇ ಆದ ಕೊಡುಗೆ ನೀಡಿದ್ದಾರೆ.

ದೇಜಗೌ ಅವರು ಕನ್ನಡ ಭಾಷೆಗೆ ಅನುವಾದ ಮಾಡಿರುವ ಪ್ರಮುಖ ಕೃತಿಗಳು

- ನೆನಪು ಕಹಿಯಲ್ಲ
- ಪುನರುತ್ಥಾನ
- ಯುದ್ಧ ಮತ್ತು ಶಾಂತಿ
- ಹಮ್ಮು-ಬಿಮ್ಮು
- ಅನ್ನಾ ಕರೆನಿನಾ

ಮೊದಲಾದ ಹಲವಾರು ನಾಟಕಗಳು. ಕಾದಂಬರಿಗಳನ್ನು ತಮ್ಮದೇ ಶೈಲಿಯಲ್ಲಿ ಅನುವಾದಿಸಿದ್ದಾರೆ.

**ಪ್ರವಾಸ ಸಾಹಿತ್ಯ ಕೃತಿಗಳು:**

ಆಫ್ರಿಕಾಯಾತ್ರೆ, ಪ್ರವಾಸಿಯ ದಿನಚರಿ. ಯೇಸು ವಿಭೀಷಣರ ನಾಡಿನಲ್ಲಿ, ವಿಸ್ಮಯಗಳ ನಾಡಿನಲ್ಲಿ, ವಿದೇಶದಲ್ಲಿ ನಾಲ್ಕು ವಾರ, ನಿಚ್ಚ ಹಸುರಿನ ನಾಡಿನಲ್ಲಿ, ಜಗತ್ತಿನ

ನಡುನೆತ್ತಿಯ ಮೇಲೆ, ಹಳದಿ ಕಲ್ಲಿನ ಉದ್ಯಾನ ಇನ್ನೂ ಅನೇಕ ಕೃತಿಗಳಲ್ಲಿ ವೈವಿಧ್ಯಮಯವಾಗಿ ಆ ಪ್ರದೇಶಗಳ ಪರಿಚಯ ಮಾಡಿಕೊಡುತ್ತಾರೆ.

**ಗ್ರಂಥಸಂಪಾದನಾ ಕೃತಿಗಳು**

ಅಜಿತಪುರಾಣ ತಿಲಕಂ, ಜೈಮಿನಿ ಭಾರತ ಸಂಗ್ರಹ, ಕಬ್ಬಿಗರ ಕಾವಂ, ಧರ್ಮಾಮೃತ, ನಳಚರಿತೆ, ರಾಮಧಾನ್ಯ ಚರಿತೆ ಹಲವಾರು ಹಳಗನ್ನಡ ಕೃತಿಗಳನ್ನು ಸಂಪಾದಿಸಿ ಪ್ರಾಚೀನ ಸಾಹಿತ್ಯದ ಮೇಲೂ ತಮ್ಮ ಕೊಡುಗೆ ನೀಡುವುದರ ಜೊತೆಗೆ ಆ ಸಾಹಿತ್ಯ ಉಳಿಯಲು ಸಹಕಾರಿಯಾಗಿದ್ದಾರೆ.

**ಸಂಶೋಧನೆ ಮತ್ತು ವಿಮರ್ಶಾ ಕೃತಿಗಳು:**

* ಇಣುಕುನೋಟ, * ನೂರೆಂಟು ಪುಸ್ತಕಗಳು, * ಮುನ್ನುಡಿಗಳು, * ಗದ್ಯಶೈಲಿ, * ಗದುಗಿನ ಭಾರತ ಒಂದು ಸಾಂಸ್ಕೃತಿಕ ಅಧ್ಯಯನ.

**ಜೀವನ ಚರಿತ್ರೆಗಳು:**

ಅಮೇರಿಕಾ ಗಾಂಧಿ, ಋಷಿಕವಿ ರವೀಂದ್ರರು, ಕನ್ನಡ ನಾಡಿನ ಕಲಿ, ಕ್ರಾಂತಿಕಾರಿ ಡಾ. ಅಂಬೇಡ್ಕರ್, ಕಾಯಕಯೋಗಿ ರಾಷ್ಟ್ರನಾಯಕ, ನಮ್ಮ ನೆಹರು, ವಿವೇಕಾನಂದರು – ಹೀಗೆ ಹಲವಾರು ಮಹಾನ್ ಪುರುಷರ ಜೀವನ ಚರಿತ್ರೆಗಳನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

**ಗದ್ಯ ಸಾಹಿತ್ಯ :** ಗದ್ಯ ಶಿಲ್ಪಿ ಎಂದೇ ಪರಿಚಿತರಾಗಿರುವ ದೇಜಗೌ ಅವರು ಕನ್ನಡ ಗದ್ಯಸಾಹಿತ್ಯದ ಮೇಲೆ ವಿಶೇಷ ಬೆಳಕು ಬೀರಿದ್ದಾರೆ.

**ಕಥಾಸಾಹಿತ್ಯ:** ನೈಜತೆಗೆ ಹತ್ತಿರವಾಗಿರುವ ವಸ್ತು ಇವರ ಕಥೆಗಳಲ್ಲಿ ಗುರುತಿಸಬಹುದಾಗಿದೆ. ಸಮಾಜಕ್ಕೆ ಸಂದೇಶವನ್ನು ನೀಡುವಂತಿವೆ.

* ದೇವರ ಮಗು, * ವಾಲಿಬಾಲಿಗೆ ವಾಲಿದ ಹುಡುಗ, * ಮಹಾಪಂಡಿತ ಕಾಲ್ಡ್‌ವೆಲ್ ಕಥೆ, * ಬಲಿ, * ಸೀಮಾ * ಪ್ರೇಮ ಮೃತ್ಯು ಮೊದಲಾದುವು.

**ಜಾನಪದ ಸಾಹಿತ್ಯ ಕೃತಿಗಳು**

ಜಾನಪದ ಸೌಂದರ್ಯ, ಜಾನಪದ ಅಧ್ಯಯನ, ಜಾನಪದ ಗೀತಾಂಜಲಿ, ಜಾನಪದ ವಾಹಿನಿ, ಭಾರತದ ಜಾನಪದ ಕಥೆಗಳು ಮೊದಲಾದ ಕೃತಿಗಳು ಜಾನಪದ ಸಾಹಿತ್ಯದ ಮೇಲೆ ಬೆಳಕು ಚೆಲ್ಲುತ್ತವೆ. ಜಾನಪದವನ್ನು ವೈಜ್ಞಾನಿಕ, ವೈಚಾರಿಕವಾಗಿ ಅಧ್ಯಯನ ಮಾಡಲು ಅವಕಾಶ ಮಾಡಿಕೊಟ್ಟರು. ಜಾನಪದವನ್ನು ಪಠ್ಯವನ್ನಾಗಿಸುವ

ಮೂಲಕ ಸ್ನಾತಕೋತ್ತರ ತರಗತಿಗೆ ಬೋಧನಾ ವಿಷಯವನ್ನಾಗಿ ಕಡ್ಡಾಯಗೊಳಿಸುವ ಮೂಲಕ ಶೈಕ್ಷಣಿಕ ನೆಲೆಯಲ್ಲಿ ಪ್ರೇರಕ ಶಕ್ತಿಯಾಗಿದ್ದಾರೆ.

**ಇಂಗ್ಲಿಷ್ ಭಾಷೆಯ ಕೃತಿಗಳು**

- A Brief Survey of Kannada Language and Literature
- Pampa * Folk belief in Southern India
- Some street – names of Mysore City ಮೊದಲಾದುವು.

**ವಚನಕಾರರಾಗಿ ದೇಜಗೌ**

ಸಾಹಿತ್ಯಕ್ಕೆ ಇಷ್ಟೆಲ್ಲಾ ಕೊಡುಗೆ ನೀಡಿದ ದೇಜಗೌ ಅವರು ಸ್ವತಃ ವಚನಗಳನ್ನು ರಚನೆಮಾಡಿದ್ದಾರೆ. ವಚನ ಸಾಹಿತ್ಯವನ್ನು ಸಾಮಾಜಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಎಲ್ಲಾ ನೆಲೆಗಳಿಂದಲೂ ಅಧ್ಯಯನ ಮಾಡಿ, ಸಂಶೋಧನೆ, ವಿಮರ್ಶೆ ಮಾಡಿರುವ ದೇಜಗೌ ಅವರು ತಮ್ಮ ವಚನಗಳಲ್ಲಿಯೂ ಸಾಮಾಜಿಕ ಕಳಕಳಿಯನ್ನೇ ಹೊಂದಿದ್ದಾರೆ. ಅವರ 'ಗುರುದೇವನಡಿಗೆ' ಕೃತಿಯಲ್ಲಿ ೩೪೬ ವಚನಗಳಿವೆ. "ಅವರ ಯಾವುದೇ ಪ್ರಕಾರವನ್ನು ತೆಗೆದುಕೊಂಡರೂ ಅಲ್ಲಿ ಸಮೃದ್ಧತೆಯನ್ನು ಕಾಣಬಹುದು. ಭಾವಸಮೃದ್ಧಿ, ಭಾಷಾಸಮೃದ್ಧಿ, ವಿಷಯ ಸಮೃದ್ಧಿ ಎದ್ದುಕಾಣುತ್ತದೆ".[೪]

ಹಾಗಾಗಿಯೇ ದೇಜಗೌ ಅವರನ್ನು ಇತರರಿಗಿಂತ ಭಿನ್ನವಾಗಿ ಸಾಹಿತ್ಯಕ್ಷೇತ್ರದಲ್ಲಿ ಗುರುತಿಸಬಹುದಾಗಿದೆ. ಇಷ್ಟೇ ಅಲ್ಲದೇ ಇವರು ಪ್ರಬಂಧ ಸಾಹಿತ್ಯ, ಮುನ್ನುಡಿ, ಭಾಷಣ ಸಾಹಿತ್ಯ, ಪತ್ರಸಾಹಿತ್ಯ, ಅಂಕಣ ಸಾಹಿತ್ಯ, ಚುಟುಕು ಸಾಹಿತ್ಯ, ಮಕ್ಕಳ ಸಾಹಿತ್ಯವನ್ನು ರಚನೆಮಾಡಿದ್ದಾರೆ. ಇವರ ಎಲ್ಲಾ ಸಾಹಿತ್ಯ ಕೃತಿಗಳಲ್ಲಿ ಜೀವನ ಮೌಲ್ಯವಿದೆ, ಆದರ್ಶಗಳಿವೆ, ಮಾರ್ಗದರ್ಶನಗಳಿವೆ, ಮಾಹಿತಿಗಳಿವೆ, ಜ್ಞಾನವಿದೆ, ಆತ್ಮವಿಶ್ವಾಸವಿದೆ, ಅಭಿಮಾನವಿದೆ.

ದೇಜಗೌ ಅವರನ್ನು ಶೈಕ್ಷಣಿಕವಾಗಿ, ಸಾಹಿತ್ಯಿಕವಾಗಿ ಮಾಡಿದ ಸಾಧನೆಯಷ್ಟೇ ಸಾಂಘಿಕ ಶಕ್ತಿಯಾಗಿಯೂ ಗುರುತಿಸಬಹುದು. ದೂರದೃಷ್ಟಿ, ದಕ್ಷತೆ, ಪ್ರತಿಭೆಗಳ ಸಂಗಮವಾದ ಇವರು ಹಲವಾರು ಸಂಘಸಂಸ್ಥೆಗಳನ್ನು ಕಟ್ಟಿ ಬೆಳೆಸುತ್ತಿದ್ದಾರೆ. ನಿಷ್ಠುರತೆ, ಕ್ರಿಯಾಶೀಲತೆ, ಕಾರ್ಯತತ್ಪರತೆ, ಉತ್ಸಾಹ ಇವರ ವ್ಯಕ್ತಿತ್ವವಾಗಿರುವುದರಿಂದ ಯಶಸ್ವಿಯಾಗಿ ಬೆಳೆಯುತ್ತಿವೆ.

ಜ್ಞಾನೋದಯ ಸಂಘ. ವಚನ ಸಾಹಿತ್ಯ ಪರಿಷತ್ತು, ಮಹಾಜನ ಸಭಾ, ದೇಜಗೌ ಟ್ರಸ್ಟ್, ಭಾಷಾಂತರ ಪರಿಷತ್ತು, ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ, ಕುವೆಂಪು ಭಾಷಾ ಭಾರತಿ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಹಿರಿಯ ನಾಗರಿಕ ಸಭಾ ಇನ್ನೂ ಹಲವಾರು ಸಂಘ–ಸಂಸ್ಥೆಗಳನ್ನು ಕಟ್ಟಿ, ಪೋಷಿಸಿ, ಬೆಳೆಸುತ್ತಿದ್ದಾರೆ.

ಕನ್ನಡ ಭಾಷೆಯ ರಕ್ಷಣೆ ಮತ್ತು ಬೆಳವಣಿಗೆಯಲ್ಲಿ ಇವರು ವಹಿಸುತ್ತಿರುವ ಪಾತ್ರ ಹಿರಿದಾದುದು.

- ಕನ್ನಡ ಶಿಕ್ಷಣ ಮಾಧ್ಯಮವಾಗಬೇಕು.
- ಆಡಳಿತ ಮಾಧ್ಯಮವಾಗಬೇಕು.
- ವಿಶ್ವಕೋಶ ಯೋಜನೆ
- ಭಾಷಾಂತರ ಯೋಜನೆ
- ಸ್ಥಳನಾಮ ಅಧ್ಯಯನದ ಬೆಳವಣಿಗೆ
- ಜಾನಪದ ಸಾಹಿತ್ಯ ಬೆಳವಣಿಗೆ
- ಕನ್ನಡ ಪಂಡಿತರಿಗೆ ಬಿ.ಎಡ್. ಒದಲು ಅವಕಾಶವಿರಬೇಕು.

ಇನ್ನೂ ಹಲವಾರು ಧ್ಯೇಯೋದ್ದೇಶಗಳನ್ನಿರಿಸಿಕೊಂಡು ಕನ್ನಡನಾಡು ನುಡಿಯ ಉಳಿವಿಗಾಗಿ ಅನೇಕ ಉಪವಾಸ ಸತ್ಯಾಗ್ರಹಗಳು, ಹೋರಾಟಗಳನ್ನು ಮಾಡುವುದರ ಮೂಲಕ ಯುವಕರಿಗೆ ಮಾದರಿಯಾಗಿದ್ದಾರೆ. ಇತ್ತೀಚೆಗೆ ಕನ್ನಡ ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಸಿಗಲು ಅವರು ಮೈಸೂರಿನಲ್ಲಿ ಉಪವಾಸ ಸತ್ಯಾಗ್ರಹ ನಡೆಸಿ ಶಾಸ್ತ್ರೀಯ ಸ್ಥಾನಮಾನ ಸಿಗುವ ಪ್ರಮುಖ ಪಾತ್ರವಹಿಸಿದರು. ಜೀವನದ ಪ್ರತಿಯೊಂದು ಮುಖ್ಯವಾದ ಹಂತದಲ್ಲಿಯೂ ಇವರ ಸಾರ್ಥಕ ಬದುಕೆ, ಸಾಧನೆಗಳೇ ನಮಗೆಲ್ಲಾ ಮಾರ್ಗದರ್ಶಿಯಾಗಿದೆ, ದಾರಿದೀಪವಾಗಿದೆ.

## ಕೊನೆಟಿಪ್ಪಣಿಗಳು

೧. ಭಾಷೆ ಸಾಹಿತ್ಯ ಸಂಸ್ಕೃತಿಗೆ, ಪ್ರೊ. ದೇಜಗೌ ಅವರ ಕೊಡುಗೆ, ಲೇ: ಡಾ. ಟಿ.ಕೆ.ಕೆಂಪೇಗೌಡ, ಪು. ೭, ವ: ೨೦೦೮ (ಪ್ರಥಮ ಮುದ್ರಣ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨. ಅದೇ., ಪು. ೮

೩. ಅದೇ., ಪು. ೮

೪. ಅದೇ, ಪು. ೧೪೭.

*****

# ಅಧ್ಯಾಯ – ೩

## ವಚನ ಸಾಹಿತ್ಯ : ಒಂದು ವಿಶ್ಲೇಷಣೆ

ಶತಮಾನಗಳ ಇತಿಹಾಸವುಳ್ಳ ಕನ್ನಡ ಸಾಹಿತ್ಯವು ಶ್ರೀಮಂತ ಪರಂಪರೆಯನ್ನು ಹೊಂದಿದೆ. ಇಡೀ ಪ್ರಾಚೀನ ಸಾಹಿತ್ಯ ರಾಜ ಪ್ರಭುತ್ವಕ್ಕೊಳಪಟ್ಟಿತ್ತು. ಕವಿಗಳ ಆಶಯಕ್ಕೆ ಪ್ರಭುತ್ವವಿಲ್ಲದೆ ಹೋಗಿದ್ದರೆ ನಾವು ಪಂಪನನ್ನಾಗಲಿ, ರನ್ನ, ಪೊನ್ನ ಇನ್ನಾರ ಸಾಹಿತ್ಯವನ್ನು ಕಾಣಲು ಸಾಧ್ಯವಾಗುತ್ತಿರಲಿಲ್ಲ. ರಾಜಪ್ರಭುತ್ವವು ಸಂಪೂರ್ಣವಾಗಿ ಧರ್ಮದೊಂದಿಗೆ ಬೆರೆತುಹೋಗಿತ್ತು. ಆದಕಾರಣ ಧರ್ಮಪ್ರಚಾರವೇ ಪ್ರಾಚೀನ ಸಾಹಿತ್ಯದ ಮೂಲ ಉದ್ದೇಶವಾಗಿತ್ತು. ಈ ಉದ್ದೇಶ ಈಡೇರಿಕೆಗಾಗಿ ಪ್ರಾಚೀನ ಕವಿಗಳು ಕಾವ್ಯಧರ್ಮ ಮತ್ತು ಧರ್ಮನಿಷ್ಠೆ ಎರಡಕ್ಕೂ ನ್ಯಾಯ ಸಲ್ಲಿಸುವ ಉದ್ದೇಶದಿಂದ ಲೌಕಿಕ ಮತ್ತು ಅಲೌಕಿಕ ಕಾವ್ಯಗಳ ರಚನೆಗೆ ಕಾರಣಕರ್ತರಾಗುತ್ತಿದ್ದರು. ಇದರಿಂದ ಕವಿಗಳಿಗೆ ರಾಜರ ಆಶ್ರಯವು ದೊರಕುತ್ತಿತ್ತು. ರಾಜರಿಗೆ ಕೃತಿಗಳಿಂದ ಹೊಗಳಿಕೆಯು, ಜನಪ್ರಿಯತೆಯು ದೊರಕುತ್ತಿತ್ತು.

ಕವಿಗೆ ಮತ್ತು ರಾಜರಿಗೆ ಅವಿನಾಭಾವ ಸಂಬಂಧವಿತ್ತು. ಇಬ್ಬರಿಗೂ ತಮ್ಮ ಆಸೆಗಳೇ ಮುಖ್ಯವಾಗಿದ್ದವು. ಸಾಮಾಜಿಕವಾಗಿ ಜನಸಾಮಾನ್ಯರ ಸ್ಥಿತಿಗತಿಗಳು ಹೇಗಿತ್ತು ಎಂಬುದರ ಬಗ್ಗೆ ಯಾವುದೇ ಕೃತಿಗಳು ಗಂಭೀರವಾಗಿ ಚಿತ್ರಿಸುತ್ತಿರಲಿಲ್ಲ. ಯುದ್ಧ, ಜಯ, ಸೋಲು, ಅರಮನೆ ಶ್ರೀಮಂತಿಕೆ ಇವುಗಳ ವರ್ಣನೆಗಳು ಹೆಚ್ಚಾಗಿತ್ತು. ಇದಕ್ಕೆಲ್ಲಾ ಉತ್ತರವೆಂಬಂತೆ ೧೨ನೆಯ ಶತಮಾನದಲ್ಲಾದ ಚಳುವಳಿ ಇಡೀ ಸಮಾಜಕ್ಕೆ, ವ್ಯವಸ್ಥೆಗೆ ಬೆಳಕು ನೀಡಲು ಹೋರಾಡಿತು. ಜನಸಾಮಾನ್ಯರ ಬದುಕಿನ ಆಶಾಕಿರಣವಾಯಿತು. ಅದು ವಚನಗಳ ಮೂಲಕ. ಇದಕ್ಕಿಂತ ಹಿಂದೆ ಕನ್ನಡ ಭಾಷೆಗೆ ಹಾಗೂ ಸಾಹಿತ್ಯಕ್ಕೆ ಸಂಸ್ಕೃತದ ದಟ್ಟವಾದ ಪ್ರಭಾವವಿತ್ತು. ಅದನ್ನು ಹೋಗಲಾಡಿಸಿ ಆಡುನುಡಿಯಲ್ಲಿ ವಚನಗಳ ರಚನೆಯಾಯಿತು. ರಾಜಪ್ರಭುತ್ವಕ್ಕೊಳಗಾಗಿದ್ದ ಸಾಹಿತ್ಯ ಜನಸಾಮಾನ್ಯರ ದನಿಯಾಯಿತು. 'ಸ'ಹಿತವಾದದ್ದು ಸಾಹಿತ್ಯ ಎಂಬ ಮಾತಿನ ಅರ್ಥವನ್ನು ವಚನಗಳು ಸಾಕಾರಗೊಳಿಸಿದವು. "ವಚನ ಸಾಹಿತ್ಯ ಮೌಲ್ಯಗಳ ಒಂದು ಸಂಕೀರ್ಣ, ಅದು ಹಲವಾರು ಶ್ರೇಯಸ್ಕರ ಮೌಲ್ಯಗಳನ್ನು ಗರ್ಭೀಕರಿಸಿಕೊಂಡಿದೆ ಮಾತ್ರವಲ್ಲ, ತನಗೆ ತಾನೆ ಒಂದು ಮಹತ್ವದ ಮೌಲ್ಯವಾಗಿದೆ. ಈ ಮೌಲ್ಯ ಸಮುಚ್ಚಯದ ಅನುಸಂಧಾನ ಅತ್ಯಂತ ಪ್ರಸ್ತುತ ಮತ್ತು ಪ್ರಯೋಜಕ"[1]

ಲೇಖಕರ ಅಭಿಪ್ರಾಯದಂತೆ ಕೇವಲ ಸಾಹಿತ್ಯ ರಚನೆಯ ಉದ್ದೇಶದಿಂದ ವಚನಗಳು ರಚನೆಯಾಗಲಿಲ್ಲ. ಜೀವನ ಮೌಲ್ಯಗಳನ್ನು ತಿಳಿಸುವ ಉದ್ದೇಶವಾಗಿತ್ತು. ಸ್ವಸ್ಥ ಸಮಾಜ ನಿರ್ಮಾಣದ ಗುರಿಯನ್ನು ಹೊಂದಿತ್ತು. ಪ್ರತಿಯೊಬ್ಬರಿಗೂ ಅಭಿವ್ಯಕ್ತಿ ಸ್ವಾತಂತ್ರ್ಯ ಲಭಿಸಿತ್ತು.

'ಆಚಾರವೇ ಸ್ವರ್ಗ, ಅನಾಚಾರವೇ ನರಕ', 'ಆನುಒಲಿದಂತೆ ಹಾಡುವೆ' ಎಂಬ ವಚನಗಳು ವಚನಕಾರರ ನಡವಳಿಕೆ, ದಿಟ್ಟತನವನ್ನು ಹೇಳುತ್ತವೆ. ಇರುವ ಭೂಮಿಯಲ್ಲಿಯೇ ಸ್ವರ್ಗ–ನರಕಗಳನ್ನು ಕಾಣಬಹುದು. ಅದು ನಮ್ಮ ನಡವಳಿಕೆಗಳಿಂದ ನಿರ್ಧರಿತವಾಗುತ್ತದೆ. ಮನುಷ್ಯನಲ್ಲಿ ಮಾನವೀಯ ಮೌಲ್ಯಗಳನ್ನು ಜೀವಂತವಾಗಿಸುವ ಶಕ್ತಿಯನ್ನು ವಚನಗಳು ತುಂಬುತ್ತವೆ. "ಯಾವುದೇ ರಾಜಾಶ್ರಯವಿಲ್ಲದೆ ಒಂದು ರೀತಿಯಲ್ಲಿ ಪ್ರಭುತ್ವ ಮತ್ತು ಪಟ್ಟಭದ್ರರ ಕ್ರೌರ್ಯಕ್ಕೆ ಗುರಿಯಾಗಿದ್ದ ಈ ವಚನಸಾಹಿತ್ಯದ ವ್ಯವಸ್ಥಿತವಾದ ರಕ್ಷಣೆಗೆ ಮತ್ತು ಸಂಕಲನಕ್ಕೆ ೧೫ನೆಯ ಶತಮಾನದವರೆಗೆ ಕಾಯಬೇಕಾಯಿತು"[೨]

ಯಾವುದೇ ಒಂದು ಮಹತ್ಕಾರ್ಯವಾಗಲಿ, ಸಾಧನೆಯಾಗಲಿ ಅದು ಯಶಸ್ಸು ಕಾಣಬೇಕಾದರೆ ಅಧಿಕ ಸಮಯ ಬೇಕಾಗುತ್ತದೆ. ಹಾಗೆಯೇ ವೈಯಕ್ತಿಕವಾಗಿಲ್ಲದ ಇಡೀ ಸಮಾಜದ ಸುಧಾರಣೆಗೆ ಕೇವಲ ವಚನಗಳ ಮೂಲಕ ಹೋರಾಡಿದ ವಚನಕಾರರಿಗೆ, ೩ರಿಂದ ೪ ಶತಮಾನಗಳೇ ಬೇಕಾಯಿತು ಎಂಬ ವಿಷಯ ಅಚ್ಚರಿ ಮೂಡಿಸಿದರೂ ಸತ್ಯವೇ ಆಗಿದೆ ಎನ್ನಬಹುದಾಗಿದೆ. ವಚನಕಾರರ ನಂತರ ದಾಸರು ಇದೇ ಪರಂಪರೆಯನ್ನು ಮುಂದುವರೆಸಿದುದು ವಚನಸಾಹಿತ್ಯದ ಯಶಸ್ಸೇ ಆಗಿದೆ ಎನ್ನಬಹುದು. ದಾಸರ ಕೀರ್ತನೆಗಳೇ ಸಾಕ್ಷಿಯಾಗುತ್ತವೆ.

ವಚನಸಾಹಿತ್ಯ ಯುಗವನ್ನು ಕನ್ನಡ ಸಾಹಿತ್ಯದ "ಸುವರ್ಣಯುಗ" ಎಂದು ಹೇಳಬಹುದಾಗಿದೆ. ಕಾಯಕ ಮಹತ್ವವನ್ನು ಸಾರಿದ ಶರಣರು ಇಡೀ ವಿಶ್ವಕ್ಕೆ ಮಾದರಿಯಾದರು. ನುಲಿಯ ಚಂದ್ರಯ್ಯ, ಆಯ್ದಕ್ಕಿ ಮಾರಯ್ಯ, ಮಡಿವಾಳ ಮಾಚಯ್ಯ ಮುಂತಾದ ಅನೇಕ ವಚನಕಾರರು ತಮ್ಮ ವೃತ್ತಿಯಿಂದಲೇ ಗುರುತಿಸಿಕೊಂಡು ವಚನ ರಚನೆಮಾಡಿದರು. ೨೧ನೆಯ ಶತಮಾನದಲ್ಲಿಯೂ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಮಹಿಳೆಯರಿಗೆ ೧೨ನೆಯ ಶತಮಾನದಲ್ಲಿಯೇ ಅಭಿವ್ಯಕ್ತಿ ಸ್ವಾತಂತ್ರ್ಯ ಲಭಿಸಿತ್ತು. ಇದರಿಂದಲೇ ಅಕ್ಕಮಹಾದೇವಿಯಂತಹ ಅನೇಕ ವಚನಕಾರ್ತಿಯರು ಸ್ಫೂರ್ತಿಯಾಗಿ ದೊರಕಿದ್ದು, ಅಕ್ಕನಾಗಮ್ಮ, ಸಂಚಿಹೊನ್ನಮ್ಮ,

ಸತ್ಯಕ್ಕ, ಬೊಂತಾದೇವಿ, ಕಾಳವ್ವೆ ಮೊದಲಾದ ವಚನಕಾರ್ತಿಯರನ್ನು ಹೆಸರಿಸಬಹುದು. ಅವರ ಕೊಡುಗೆಯೂ ಅಪಾರ.

ಕೆಂಡದ ಮಳೆಕರೆವಲ್ಲಿ ಉದಕವಾಗಿರಬೇಕು
ಜಲಪ್ರಳಯವಾದಲ್ಲಿ ವಾಯುವಿನಂತಿರಬೇಕು
ಮಹಾಪ್ರಳಯವಾದಲ್ಲಿ ಆಕಾಶದಂತಿರಬೇಕು
ಜಗತ್ಪ್ರಳಯವಾದಲ್ಲಿ ತನ್ನ ತಾ ಬಿಡಬೇಕು
ಗುಹೇಶ್ವರಲಿಂಗ ತಾನಾಗಿರಬೇಕು.

ಅಲ್ಲಮಪ್ರಭುವಿನ ಈ ವಚನ ಮನುಷ್ಯನ ನಡವಳಿಕೆಯನ್ನು ತಿಳಿಸುತ್ತದೆ. ಮನುಷ್ಯನಿಗೆ ಧೈರ್ಯ, ಸ್ಥೈರ್ಯ, ಜೀವನೋತ್ಸಾಹ ಇರಬೇಕು ಎಂಬುದನ್ನು ಸರಳವಾಗಿ ತಿಳಿಸುತ್ತಾರೆ. ಕಷ್ಟಗಳು ಬಂದಾಗ ಎದೆಗುಂದಬಾರದು ಎಂಬುದರ ಅರ್ಥ ನೀಡುತ್ತದೆ.

"ವಚನಗಳ ವಸ್ತು ವಿನೂತನವಾದುದು. ಚಂಪೂಕಾವ್ಯಗಳು ಒಳಗೊಂಡಂತೆ ರಾಮಾಯಣ, ಮಹಾಭಾರತದ ಕಥೆಗಳನ್ನು, ತೀರ್ಥಂಕರರ ಕಥೆಗಳನ್ನು ಇಲ್ಲವೆ ಕಾಲ್ಪನಿಕ ಕಥಾನಕಗಳನ್ನು ಇವು ಒಳಗೊಂಡಿಲ್ಲ. ಅಂದಿನ ಸಮಾಜದಲ್ಲಿನ ಸಾಮಾಜಿಕ ಹಾಗೂ ಧಾರ್ಮಿಕ ಸ್ಥಿತಿಗತಿಗಳೇ ವಚನಗಳ ವಸ್ತುಗಳಾಗಿವೆ"[೩]

ಶತಶತಮಾನಗಳೇ ಕಳೆದರೂ ಜನಸಾಮಾನ್ಯರ ಸ್ಥಿತಿ–ಗತಿ ಬದಲಾಗದೆ ಇದ್ದಂತಹ ಸಂದರ್ಭದಲ್ಲಿ ಬದಲಾವಣೆ, ನ್ಯಾಯ ಬಯಸಿ ಹೋರಾಟಕ್ಕಿಳಿದರು ಎನ್ನಬಹುದು. ಪುರಾಣ ಪುಣ್ಯ ಪುರುಷರ ಜೀವನ ಕಥೆಗಳನ್ನು ಓದಿ, ತಿಳಿದುಕೊಳ್ಳುವುದರಿಂದ ನಮ್ಮ ಸಮಸ್ಯೆಗಳು, ನೋವು, ದುಃಖಗಳು ಕಡಿಮೆಯಾಗುವುದಿಲ್ಲ. ಸಮಾಜದ ಅನಿಷ್ಟ ಪದ್ಧತಿಗಳು ಹೋಗಿ ಸಮಾನತೆ ಸಾಧಿಸಲು ಸಾಧ್ಯವಾಗುವುದಿಲ್ಲ ಎಂಬ ಅರಿವು ಜನಸಾಮಾನ್ಯನಲ್ಲೇ ಮೂಡಿತು. ಇದಕ್ಕೆ ವಚನಗಳು ಸ್ಫೂರ್ತಿಯಾದವು. ಹಾಗಾಗಿ ವಿನೂತನ, ವಿಶಿಷ್ಟ ಪ್ರಯೋಗ ೧೨ನೆಯ ಶತಮಾನದಲ್ಲಾಯಿತು ಎಂದು ಹೇಳಬಹುದು.

೧೨ನೆಯ ಶತಮಾನದ ಅದ್ಭುತ ಸೃಷ್ಟಿಯಲ್ಲೊಂದಾದ ಅನುಭವಮಂಟಪ "ಶೂನ್ಯ ಸಿಂಹಾಸನಗಳ ರಚನೆಯೇ ಅದ್ಭುತ. ಇದರಲ್ಲಿ ಎಲ್ಲಾ ವರ್ಗದ ಜನರ ಭಾವನೆಗಳು ವ್ಯಕ್ತವಾಗುತ್ತಿದ್ದವು. ಹೊಸ ಸಮಾಜದ ನಿರ್ಮಾಣಕ್ಕೆ ಅಡಿಪಾಯ ಹಾಕಿದಂತಾಯಿತು. ಮೂಢನಂಬಿಕೆಗಳ ಜಾಗದಲ್ಲಿ ವೈಚಾರಿಕ ಮನೋಭಾವ

ಬೆಳೆಯಲು ಪ್ರಾರಂಭವಾಯಿತು. ಅಂತರ್ಜಾತೀಯ ವಿವಾಹಗಳ ಮೂಲಕ ಜಾತ್ಯಾತೀತ ಸಮಾಜ ನಿರ್ಮಾಣಕ್ಕೆ ಪ್ರಯತ್ನಿಸಲಾಯಿತು. ಆದರೆ ಇಂದು ಆ ಪ್ರಯತ್ನಗಳು ಎಷ್ಟು ಪ್ರಭಾವ ಬೀರಿವೆ, ಪರಿಣಾಮಕಾರಿಯಾಗಿವೆ ಎಂಬುದನ್ನು ನಾವು ಯೋಚಿಸಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ.

'ಸಾಹಿತ್ಯಿಕವಾಗಿಯೂ ಹನ್ನೆರಡನೆ ಶತಮಾನ ಜನಪರ ನಿಲುವಿನತ್ತ ಒಲಿದು ಜನಸಾಮಾನ್ಯರ ಭಾಷೆಯ ಮೂಲಕವೇ ಭಕ್ತಿ, ಆಧ್ಯಾತ್ಮ, ಅನುಭಾವಗಳೆಲ್ಲವನ್ನೂ ಅಭಿವ್ಯಕ್ತಿಸಿ ಕನ್ನಡ ಸಾಹಿತ್ಯದಲ್ಲಿಯೂ ಬದಲಾವಣೆ ಗಾಳಿ ಬೀಸಲು ಅವಕಾಶ ಮಾಡಿಕೊಟ್ಟಿತು.'[9]

ಕಾವ್ಯಾತ್ಮಕವಾಗಿ, ರಂಜನೀಯವಾಗಿ ರಚಿಸುತ್ತಿದ್ದ, ಪೌರಾಣಿಕ ವಿಷಯಗಳನ್ನೊಳಗೊಂಡ ಸಾಹಿತ್ಯ ಸಾಮಾನ್ಯ ಜನರಿಗೆ ಬೇಡವಾಗಿತ್ತು. ಅವರ ಶೋಚನೀಯ ಸ್ಥಿತಿ, ಅವರಿಗಾಗುತ್ತಿದ್ದ ಶೋಷಣೆ, ಅನ್ಯಾಯಗಳಿಗೆ ಮುಕ್ತಿ ದೊರೆಯಬೇಕಾಗಿತ್ತು. ಕೇವಲ ಹೊಡೆದಾಟ-ಬಡಿದಾಟಗಳ ಮೂಲಕ ಸಾಮಾಜಿಕ ಸ್ಥಾನಮಾನ, ಸಮಾನತೆ ಪಡೆಯಲು ಸಾಧ್ಯವಾಗದೆ ಇದ್ದ ಸಂದರ್ಭದಲ್ಲಿ ವಚನಸಾಹಿತ್ಯದ ಪಾತ್ರ ಹಿರಿದಾದುದಾಗಿದೆ. ಪ್ರತಿಯೊಬ್ಬರಲ್ಲಿಯೂ ಜಾಗೃತಿ ಮೂಡಿಸಿದೆ.

ವಚನಗಳಲ್ಲಿ ಮಾತಿಗೆ ಮೀರಿದ ಸೂಕ್ಷ್ಮವಾದ ಭಾವನೆಗಳು ವ್ಯಕ್ತವಾಗಿವೆ. ವೈಜ್ಞಾನಿಕ, ವೈಚಾರಿಕ ಅಂಶಗಳು ಅಡಕವಾಗಿವೆ. ವಚನಗಳ ಮತ್ತೊಂದು ವಿಶೇಷತೆಯೆಂದರೆ ಪ್ರತಿಯೊಬ್ಬ ವಚನಕಾರರು ತಮ್ಮ ತಮ್ಮ ಇಷ್ಟದೈವವನ್ನು ಅಂಕಿತನಾಮವನ್ನಾಗಿರಿಸಿಕೊಂಡು ತಾವು ರಚನೆಮಾಡಿದ ವಚನದ ಕೊನೆಯಲ್ಲಿ ನಮೂದಿಸಿದ್ದಾರೆ. ಜೇಡರದಾಸಿಮಯ್ಯನದು 'ರಾಮನಾಥ', ಬಸವಣ್ಣನವರದು 'ಕೂಡಲಸಂಗಮದೇವ, ಪ್ರಭುದೇವರದು 'ಗುಹೇಶ್ವರ', ಅಕ್ಕಮಹಾದೇವಿ 'ಚೆನ್ನಮಲ್ಲಿಕಾರ್ಜುನ', ಮುಕ್ತಾಯಕ್ಕ 'ಅಜಗಣ್ಣತಂದೆ' ಹೀಗೆ ತಮ್ಮ ಅಂಕಿತದೊಂದಿಗೆ ವಚನವನ್ನು ಮುಕ್ತಾಯಮಾಡುತ್ತಾರೆ.

ವಚನಗಳು ಆತ್ಮಸಾಕ್ಷಿಯ ಮಾತುಗಳಾಗಿದ್ದವು. ಶರಣರು ಕೂಡ ನುಡಿದಂತೆ ನಡೆಯುತ್ತಿದ್ದರು. ಇಡೀ ವಚನ ಸಾಹಿತ್ಯವನ್ನು ಗಮನಿಸಿದಾಗ ನೈತಿಕ, ಆಧ್ಯಾತ್ಮಿಕ, ಸಾಮಾಜಿಕ, ಬೌದ್ಧಿಕ, ಮಾನಸಿಕ ಮುಂತಾದ ಎಲ್ಲ ಕ್ಷೇತ್ರಗಳಲ್ಲಿಯೂ ಪ್ರಭಾವ ಬೀರಿದೆ. ವಚನಯುಗದ ನಂತರದ ಸಾಹಿತ್ಯಕ್ಕೆ ಪ್ರೇರಕ, ಪೋಷಕ ಶಕ್ತಿಯಾಗಿದೆ. ಪದವಿ,

ಅಧಿಕಾರ, ಪ್ರತಿಷ್ಠೆ, ಸ್ವಾರ್ಥಪರತೆಗಾಗಿ ಸಾಹಿತ್ಯ ರಚನೆ ಮಾಡುತ್ತಿರುವ, ನೈತಿಕತೆಯೇ ಮರೆಯಾಗುತ್ತಿರುವ ನಮ್ಮ ಇಂದಿನ ಸಾಹಿತ್ಯಕ್ಕೆ, ಕವಿಗಳಿಗೆ ಮಾರ್ಗದರ್ಶಕವಾಗಿದೆ, ಸ್ಫೂರ್ತಿಯನ್ನು ನೀಡುತ್ತಿದೆ.

"ಆತ್ಮನಿವೇದನೆ, ಸಾಮಾಜಿಕ ವಿಡಂಬನೆ, ಕಾವ್ಯಗುಣಗಳಂತಹ ಅನೇಕ ವೈಶಿಷ್ಟ್ಯಗಳಿಂದ ಕೂಡಿರುವ ಸಾಹಿತ್ಯದಲ್ಲಿ ಮುಖ್ಯವಾಗಿ ಮೇಲೆ ಕಾಣುವ ಅಂಶವೆಂದರೆ ಅದರ ಮುಕ್ತರೂಪ"೫

ಜನಸಾಮಾನ್ಯರಿಗೆ ಸಿಲುಕದಷ್ಟು ದೂರವಿದ್ದ, ಒಂದು ವರ್ಗದವರ ಸ್ವತ್ತಾಗಿದ್ದ ಸಾಹಿತ್ಯ ಇಡೀ ಸಮಾಜದ ಅಂಕುಡೊಂಕುಗಳನ್ನು, ನೋವು, ಸಂಕಟಗಳನ್ನು ಮುಕ್ತವಾಗಿ ಹೇಳಿಕೊಳ್ಳುವ ಒಂದು ಮಾಧ್ಯಮವಾಗಿ ೧೨ನೆಯ ಶತಮಾನದ ವಚನ ಸಾಹಿತ್ಯಯುಗ ಕೆಲಸಮಾಡಿದೆ ಎಂಬುದು ಲೇಖಕರ ಅಭಿಪ್ರಾಯವೂ ಆಗಿದೆ. ವಚನಕಾರರು ತಮ್ಮ ಅನುಭವಗಳನ್ನು ಅನುಭಾವಿಸಿ ವಚನರೂಪಕ್ಕಿಳಿಸುತ್ತಿದ್ದರು. ಭಾಷೆಯಲ್ಲಾದ ಒಂದು ಬದಲಾವಣೆಯು ಇಲ್ಲಿ ಗಮನಾರ್ಹವಾಗಿದೆ. ಅಲ್ಲದೆ ವಚನಸಾಹಿತ್ಯ ತನ್ನ ನಂತರದ ಅನೇಕ ಸಾಹಿತ್ಯ ಪ್ರಕಾರಗಳಿಗೆ ಸ್ಫೂರ್ತಿಯಾಯಿತು. ಕೇವಲ ಜಗಳ-ಕದನಗಳ ಮೂಲಕ ಬಗೆಹರಿಯದಿದ್ದ ಸಮಸ್ಯೆಗಳನ್ನು ವಚನಗಳು ಬಗೆಹರಿಸಿದವೆಂದರೆ ಅವುಗಳ ಮೌಲ್ಯ ಉನ್ನತ ಮಟ್ಟದಲ್ಲಿತ್ತು.

ವಚನ ಸಾಹಿತ್ಯ ಸೃಜನಶೀಲ ಸಾಹಿತ್ಯ ಎಂದೇ ಹೇಳಬಹುದು. ಐತಿಹಾಸಿಕ, ಪೌರಾಣಿಕ ಎಂದೋ ನಡೆದ ಘಟನೆಗಳನ್ನು ಪುನರಾವರ್ತನೆ ಮಾಡಿ ಚಿತ್ರಿಸುವುದು ಮುಖ್ಯವಾಗಿರಲಿಲ್ಲ. ಪ್ರಸ್ತುತ ಸಮಾಜದ ಸಮಾನತೆ ಮುಖ್ಯವಾಗಿತ್ತು. ಹೊಸ ವಿಚಾರಗಳು ಅವರಲ್ಲಿದ್ದವು. ವಚನ ಪೂರ್ವದಲ್ಲಿ ಇದ್ದ ಜಾತಿವ್ಯವಸ್ಥೆ ಹೋಗಲಾಡಿಸುವುದು ಮುಖ್ಯ ಉದ್ದೇಶವಾಗಿತ್ತು. ಮೂಢನಂಬಿಕೆಯ ಜಾಗದಲ್ಲಿ ವೈಚಾರಿಕ ಅರಿವು ಮೂಡಿಸುವುದಾಗಿತ್ತು. ಆದರೆ ಹಿಂದೆ ಪ್ರಬಲವಾಗಿದ್ದ ಜೈನ ಸಾಹಿತ್ಯ ಪುನುರ್ಜನ್ಮ, ವಂಶಾವಳಿ, ವೈರಾಗ್ಯ, ಮುಕ್ತಿ ಮುಂತಾದ ವಿಚಾರಗಳಿಗೆ ಹೆಚ್ಚು ಒತ್ತು ಕೊಡುತ್ತಿತ್ತು. ಮನುಷ್ಯ ಸತ್ತ ನಂತರದ ಪಾಪಕರ್ಮಾದಿಗಳಿಗೆ ತಕ್ಕಂತೆ ಪುನರ್ಜನ್ಮ ಪಡೆಯುತ್ತಾನೆ ಎಂಬ ನಂಬಿಕೆಯನ್ನು ಬಲಪಡಿಸಿತ್ತು. ಆದರೆ ವಚನ ಸಾಹಿತ್ಯದ ನಂಬಿಕೆಯೇ ಮಾನವೀಯ ನೆಲೆಯಾಗಿತ್ತು. ಮನುಷ್ಯ ಬದುಕಿರುವಾಗಲೇ ಅವನ ನಡೆ, ನುಡಿ, ಆಂತರಿಕ, ಬಹಿರಂಗ ಶುದ್ಧಿಗೆ ಮಾನ್ಯತೆ ಕೊಟ್ಟಿತ್ತು. ವಚನಗಳು ಅಂತರಂಗದ ಬೆಳಕಾಗಿವೆ.

ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಶರಣರಲ್ಲಿ ದೇವಾಲಯದ ಕಲ್ಪನೆಯೇ ಬೇರೆಯಾಗಿತ್ತು. ದೇಹವೇ ದೇಗುಲ ಎಂದು ನಂಬಿದ್ದರು. ವಚನ ಸಾಹಿತ್ಯವು ಉದಾತ್ತವಾದ ಧ್ಯೇಯೋದ್ದೇಶವನ್ನು ಹೊಂದಿತ್ತು. ವಚನಗಳಲ್ಲಿ ಯಾಂತ್ರಿಕತೆ ಇರಲಿಲ್ಲ. ನೈಜತೆ ಇದ್ದು ಆಡಂಬರವಿರಲಿಲ್ಲ. ಅನಾವಶ್ಯಕ ಪದಪುಂಜಗಳ ಬಳಕೆಯಿಲ್ಲ. ನುಡಿದಂತೆ ನಡೆಯುವ ಭಾವವಿತ್ತು.

"ನುಡಿದರೆ ಮುತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು
ನುಡಿಯೊಳಗೆ ನಡೆಯದಿದ್ದರೆ
ಕೂಡಲ ಸಂಗಮದೇವನೆಂತೊಲಿವನಯ್ಯ"

ಬಸವಣ್ಣನವರ ಈ ವಚನವೇ ಮಾನವರ ನಡೆ–ನುಡಿ ಸ್ವಭಾವ ಹೇಗಿರಬೇಕೆಂಬುದನ್ನು ಚಿಕ್ಕದಾಗಿ, ಚೊಕ್ಕದಾಗಿ, ಸರಳವಾಗಿ ತಿಳಿಸಿಕೊಡುತ್ತದೆ. ಮಾತು ಮನುಷ್ಯನ ಉದ್ಧಾರಕ್ಕೆ, ಅವನತಿಗೆ ಎರಡಕ್ಕೂ ಕಾರಣವಾಗುತ್ತದೆ ಎಂಬ ಅರಿವು ಪ್ರತಿಯೊಬ್ಬರಲ್ಲಿಯೂ ಇರಬೇಕಾಗುತ್ತದೆ.

ವಚನಕಾರರು ಯಾವುದೇ ಶಾಸ್ತ್ರಗಳನ್ನು ಓದಿದವರು ಅಲ್ಲ, ತರಬೇತಿ ಪಡೆದವರು ಅಲ್ಲ, ಕೇವಲ ಅನುಭವಗಳ ಅಭಿವ್ಯಕ್ತಿ. ಅದಕ್ಕಾಗಿಯೇ ಜನಸಾಮಾನ್ಯನ ಸಾಹಿತ್ಯ ಎಂದು ಹೇಳಲಾಗಿದೆ. ವಚನಕಾರರದು ಕೇವಲ ಆಲೋಚನೆ ಅಥವಾ ಯೋಜನೆಯಾಗಿರಲಿಲ್ಲ ಅನುಷ್ಠಾನಕ್ಕೆ ಬರುವಂತಹದ್ದಾಗಿತ್ತು.

"ಜಗತ್ತಿನಲ್ಲಿ ವಚನಸಾಹಿತ್ಯದಂಥ ಉನ್ನತ ಮಟ್ಟದ ಮತ್ತೊಂದು ಸಾಹಿತ್ಯವಿಲ್ಲ ಎಂಬ ಮಾತು ಉತ್ಪ್ರೇಕ್ಷೆಯಲ್ಲ. ಮಾನವ ಪ್ರೀತಿ, ಸೋದರಭಾವ, ಅಂತರ್ಸತ್ವಗಳಂಥ ಮಾನವೀಯ ಮೌಲ್ಯಗಳನ್ನು ತಂದುಕೊಟ್ಟದ್ದು ಅದು. ಅಂತೆಯೇ ಅದು ವಿಶ್ವಸಾಹಿತ್ಯ"[೬]

ಲೇಖಕರ ಈ ಅಭಿಪ್ರಾಯವನ್ನು ಎಲ್ಲರೂ ಒಪ್ಪುವಂತಹುದೇ. ಇಡೀ ಪ್ರಪಂಚ ಕಂಡರಿಯದ ಸಾಹಿತ್ಯ, ಮಾದರಿಯಾದ ಸಾಹಿತ್ಯ ವಚನ ಸಾಹಿತ್ಯವಾಗಿದೆ.

೧೨ನೆಯ ಶತಮಾನದ ಹಿಂದಿನ, ನಂತರದ ಸಾಹಿತ್ಯವನ್ನು ಶ್ರೇಷ್ಠ ಕವಿಗಳ ಹೆಸರಿನಲ್ಲಿ ಗುರುತಿಸಲಾಗಿದೆ. ಪಂಪಯುಗ, ಕುಮಾರ ವ್ಯಾಸಯುಗ ಹೀಗೆ. ಆದರೆ

ವಚನಸಾಹಿತ್ಯವನ್ನು ಬಸವಯುಗ ಎಂದು ಗುರುತಿಸಬಹುದಾದರೂ ಶ್ರೀ ಸಾಮಾನ್ಯ ಸಾಹಿತ್ಯಯುಗ ಎಂದು ಕರೆಯಲಾಗಿದೆ. ಏಕೆಂದರೆ ಒಬ್ಬ ಕವಿಯಿಂದ ಅದು ಸಾರ್ಥಕಪಡೆಯಲಿಲ್ಲ. ಒಂದೊಂದು ಕೃತಿಯಿಂದ ಶ್ರೇಷ್ಠತೆ ಪಡೆಯಲಿಲ್ಲ. ನೂರಾರು ಶರಣರ, ನೂರಾರು ಕಾಯಕ ವೃತ್ತಿಯವರ, ವಿವಿಧ ವರ್ಗದವರ ಅಭಿವ್ಯಕ್ತಿ ಮಾಧ್ಯಮವಾಗಿದೆ. ಸರ್ವೋದಯದ ಕಲ್ಪನೆ ಸಾಹಿತ್ಯದ ಗುರಿಯಾಗಿತ್ತು. ಕವಿಗಳಾಗಬೇಕೆಂಬ ಉದ್ದೇಶದಿಂದ ವಚನಗಳನ್ನು ರಚನೆಮಾಡಲಿಲ್ಲ. ಧಾರ್ಮಿಕ, ಸಾಮಾಜಿಕ ಅರಾಜಕತೆಯನ್ನು ಹೋಗಲಾಡಿಸುವುದು ಮುಖ್ಯವಾಗಿತ್ತು.

ವಿಶೇಷ ಗೂಢಾರ್ಥವನ್ನು ಇಟ್ಟುಕೊಂಡು ಬೆಡಗಿನ ವಚನಗಳು ವಿಶಿಷ್ಟವಾಗಿ ರಚನೆಯಾದವು. ಶುಷ್ಕ ನಿರೂಪಣೆಯಿಲ್ಲದೆ ಬದುಕಿನ ಆರ್ದ್ರತೆ ಈ ವಚನಗಳಲ್ಲಿತ್ತು. ಅಲ್ಲಮಪ್ರಭು ಹೆಚ್ಚು ಬೆಡಗಿನ ವಚನಗಳನ್ನು ರಚಿಸಿದ್ದಾನೆ. ಸಾಂಕೇತಿಕ ಭಾಷೆಯಲ್ಲಿ ಹೇಳುವುದು ಇದರ ಉದ್ದೇಶವಾಗಿತ್ತು.

"ನೀರಿಲ್ಲದ ಒರಳಿಂಗೆ ನೆಳಲಿಲ್ಲದ ಒನಕೆ
ರೂಹಿಲ್ಲದ ನಾರಿಯರು ಬೀಜವಿಲ್ಲದಕ್ಕಿಯ
ತಳಿಸುತ್ತಾ ಬಂಜೆಯ ಮಗನ
ಜೋಗುಳವಾಡುತ್ತೈದಾರೆ
ಗುಹೇಶ್ವರನ ಕಂದನು ಲೀಲೆಯಾಡಿದನು"[2]

ಮನಸ್ಸಿನಲ್ಲಿ ಭಕ್ತಿ ಎಂಬುದು ಹೇಗೆ ಮೂಡುತ್ತದೆ. ದೇವನೆಂದರೆ ಶಿವ ಎಂಬ ಭಾವ ಹೇಗೆ ಮೂಡುತ್ತದೆ ಎಂಬುದನ್ನು ಈ ಮಾತಿನ ಮೂಲಕ ವಚನಕಾರರು ತಿಳಿಸಿದ್ದಾರೆ.

ವಚನಸಾಹಿತ್ಯದಲ್ಲಿ ವಿಶ್ಲೇಷಣೆ ಮಾಡಿದಷ್ಟು ಹೊಸ ವಿಚಾರಗಳು ಉದಯವಾಗುತ್ತವೆ. ಅಪೂರ್ವವೂ, ಅಮೂಲ್ಯವೂ ಆದ ವಚನಸಾಹಿತ್ಯ ಕನ್ನಡಕ್ಕೆ ಮಾತ್ರವಲ್ಲದೆ, ಇಡೀ ವಿಶ್ವಕ್ಕೆ ಮಾದರಿಯಾಗಿದೆ. ವಚನ ಸಾಹಿತ್ಯದಲ್ಲಿ ಸಮಾಜವಾದವು ಇದೆ, ಅರ್ಥಶಾಸ್ತ್ರವು ಇದೆ. ರಾಜಕೀಯವೂ ಇದೆ. ಮನೋವೈಜ್ಞಾನಿಕ ಅಂಶಗಳು, ಆರೋಗ್ಯಕ್ಕೆ ಸಂಬಂಧ ಪಟ್ಟ ವಿಚಾರಗಳು ಎಲ್ಲಾ ವಿಚಾರಧಾರೆಗಳು ವಚನ ಸಾಹಿತ್ಯದಲ್ಲಿ ಅಡಕವಾಗಿವೆ. ವಚನ ಸಾಹಿತ್ಯ ಯಾವುದರ ಕುರಿತು ಹೇಳಿಲ್ಲ ಎಂಬ ಯೋಚನೆ ಮೂಡುತ್ತದೆ. ಈ ಎಲ್ಲಾ ವಿಚಾರಗಳನ್ನು ದೇಜಗೌ ಅವರ ವಚನ ಸಾಹಿತ್ಯದ ಕೃತಿಗಳಲ್ಲಿ ಪಡೆದುಕೊಳ್ಳಬಹುದು.

## ಕೊನೆಟಿಪ್ಪಣಿಗಳು

೧. ಮಲೆಯೂರು ಗುರುಸ್ವಾಮಿ (ಸಂಪಾದಕರು). ಸೋಮಸಿರಿ, ವಚನಸಾಹಿತ್ಯ : ಮೌಲ್ಯ ವಿವೇಚನೆ – ಡಾ॥ ಸಿ.ಪಿ.ಕೃಷ್ಣಕುಮಾರ್, ಸುವರ್ಣ ಮಹೋತ್ಸವ ಸಮಿತಿ, ಶ್ರೀ ವೀರಸಿಂಹಾಸನ ಶಿಲಾಮಠ, ಸೋಮಹಳ್ಳಿ, ಪ್ರಥಮಮುದ್ರಣ, ೨೦೦೦, ಪು. ೨೩೩.

೨. ಪ್ರೊ. ಜಿ.ಎಸ್.ಸಿದ್ಧಲಿಂಗಯ್ಯ, ಶೂನ್ಯಸಂಪಾದನೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ. ಮೈಸೂರು, ೨೦೦೩, ಪು. ೮.

೩. ವಚನಗಳಲ್ಲಿ ಲೋಕವಿಡಂಬನೆ, ಡಾ. ವಿ.ಜಿ.ಪೂಜಾರ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೧೧, ಪು. ೧೫.

೪. ವಚನಕಾರ್ತಿಯರು, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಲೇ: ಡಾ. ಎಂ.ಎಸ್.ವೇದಾ, ೨೦೧೧, ಪು. ೧೩.

೫. ಡಾ. ಸಿ.ಪಿ.ಕೆ ಅವರ ವಿಮರ್ಶೆ ಮತ್ತು ವಿಚಾರ– ಒಂದು ಅಧ್ಯಯನ, ಲೇ: ಡಾ. ಪರ್ವಿನ್ ಸಲೀಂ, ಮೊದಲ ಮುದ್ರಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೧, ಪು. ೧೦೭,

೬. ಪ್ರೊ. ಟಿ.ಆರ್.ಮಹಾದೇವಯ್ಯ, ವಚನಗಳಲ್ಲಿ ಜೀವನಮೌಲ್ಯಗಳು, ಪ್ರಥಮ ಮುದ್ರಣ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು. ೨೦೧೧, ಪು. ೧೧೭.

೭. ಅದೇ., ಪು. ೧೨೫.

*****

# ಅಧ್ಯಾಯ – ೪

# ವಚನಗಳಲ್ಲಿ ಸಮಾಜವಾದ

ಮಾನವ ಸಂಘಜೀವಿ. ಒಬ್ಬಂಟಿಯಾಗಿ ಬಾಳಲಾರ. ಪ್ರಕೃತಿಯ ಸೃಷ್ಟಿಯಲ್ಲಿ ವಿಶಿಷ್ಟ ಜೀವಿಯೆಂದರೆ ಮನುಷ್ಯ. ಪ್ರಕೃತಿಯಲ್ಲಿ ವಾಸಿಸುವ ಇತರ ಎಲ್ಲಾ ಜೀವಿಗಳಿಗಿಂತ ವಿಭಿನ್ನವಾಗಿ ಕಾಣಿಸಿಕೊಳ್ಳುವುದು ಮನುಷ್ಯನೇ. ಏಕೆಂದರೆ ಇತರ ಪ್ರಾಣಿಗಳಿಗೆ ಇರದ ಶಕ್ತಿ ಮನುಷ್ಯನಿಗಿದೆ. ಅದು ಯೋಚನೆ ಮಾಡುವುದು ಮತ್ತು ಮಾತನಾಡುವುದು.

ಆದಿಮಾನವ ಇತರ ಎಲ್ಲಾ ಪ್ರಾಣಿಗಳೊಂದಿಗೆ ಕಾಡಿನಲ್ಲೇ ವಾಸಿಸುತ್ತಿದ್ದನಂತರದಲ್ಲಿ ತನ್ನ ಬದುಕಿಗಾಗಿ, ಉಳಿವಿಗಾಗಿ ಅನೇಕ ಆವಿಷ್ಕಾರಗಳನ್ನು ಕಂಡುಕೊಂಡ ಉದಾ: ಬೆಂಕಿ, ಆಹಾರ ಮುಂತಾದುವು. ಅನಂತರ ನಾಗರೀಕತೆಯ ಪ್ರವೇಶವಾದ ಮೇಲೆ ಅವನ ಬದುಕಿನ ರೀತಿಯೇ ಬೇರೆಯಾಯಿತು. ಪರಸ್ಪರ ಸಂವಹನಕ್ಕಾಗಿ ಒಂದು ಮಾಧ್ಯಮವಾಗಿ ಭಾಷೆಯನ್ನು ಕಂಡುಕೊಂಡ. ಪ್ರಕೃತಿಯ ವೈಪರೀತ್ಯಗಳಾದ ಗಾಳಿ, ಮಳೆ, ಬಿಸಿಲು, ಚಳಿಯಿಂದ ರಕ್ಷಿಸಿಕೊಳ್ಳಲು ಬಟ್ಟೆ, ವಸತಿ ಎಲ್ಲವನ್ನು ತನ್ನ ಬುದ್ಧಿಗೆ ತಕ್ಕಂತೆ ರೂಪಿಸಿಕೊಂಡ ಮನರಂಜನೆಗಾಗಿ ರೂಢಿಸಿಕೊಂಡ ಹಾಡುವುದು, ಕುಣಿಯುವುದು ಮುಂತಾದುವು ಇವನ ಜೀವನ ಶೈಲಿಯಾದವು.

ಮಾನವ ಸಂಘಜೀವಿಯಾದುದರಿಂದ ಅವನಿಗೆ ತನ್ನದೇ ಆದ ಕುಟುಂಬದಲ್ಲಿ ರೂಪಿಸಿಕೊಂಡ. ಅದರಲ್ಲಿ ರಕ್ತಸಂಬಂಧಗಳ ಸಂಬಂಧವಿತ್ತು. ಹೀಗೆ ರೂಢಿಸಿಕೊಂಡ ಸಂತರ ಸಂಖ್ಯೆ ಹೆಚ್ಚಾದಂತೆ ಸಮಾಜ ಸೃಷ್ಟಿಯಾಯಿತು. ಆ ಸಮಾಜದಲ್ಲಿ ಎಲ್ಲಾ ವರ್ಗದ, ಗುಂಪಿನ, ಜನರು ವಾಸಮಾಡತೊಡಗಿದರು. ವೃತ್ತಿಗೆ ತಕ್ಕಂತೆ ವರ್ಗ ರಚನೆಯಾಯಿತು. ಈಗಲೂ ಅದು ಮುಂದುವರೆಯುತ್ತಿರುವುದನ್ನು ಕಾಣಬಹುದಾಗಿದೆ. ಅವರಿಗೆ ಅವರದೇ ಆದ ಜೀವನ ಶೈಲಿ ರೂಢಿಯಾಯಿತು.

ಹಲವಾರು ರೀತಿಯ ರೂಢಿ, ಸಂಪ್ರದಾಯ, ಆಚಾರ–ವಿಚಾರ, ಸಂಸ್ಕೃತಿಗಳು ರೂಢಿಯಾದವು. ಅವನೇ ಸೃಷ್ಟಿಮಾಡಿಕೊಂಡ ಎನ್ನಬಹುದು. ನದಿಯ ದಡದಲ್ಲಿ ನಾಗರಿಕತೆಯ ಆರಂಭವಾದುದರಿಂದ ಮೊದಲೇ ಕಂಡುಕೊಂಡಿದ್ದ ಆಹಾರಕ್ರಮ, ವೇಷಭೂಷಣಗಳಲ್ಲಿ ವಿಶೇಷತೆ ಕಂಡುಕೊಂಡ ಶಿಲಾಯುಗದಲ್ಲಿ ಕಲ್ಲನ್ನೇ ಚೂಪುಮಾಡಿಕೊಂಡ ಬೇಟೆಗಾಗಿ ಆಯುಧ ಮಾಡಿಕೊಂಡಿದ್ದ ಮನುಷ್ಯ ಕಾಲಾನಂತರದಲ್ಲಿ ತನ್ನ ಬುದ್ಧಿಶಕ್ತಿಯಿಂದ ಲೋಹದಿಂದ ಆಯುಧ ಮಾಡಿಕೊಳ್ಳಲು

ಪ್ರಾರಂಭಿಸಿದ ತದನಂತರ ಚಕ್ರ, ಯಂತ್ರಗಳ ಬಳಕೆಯನ್ನು ಕಂಡುಕೊಂಡ ಯಂತ್ರಗಳು, ಕೈಗಾರಿಕೆಗಳು, ವಾಹನಗಳು, ಗೃಹಬಳಕೆಯ ವಸ್ತುಗಳನ್ನು ತಯಾರಿಸಿದ. ಸಮಾಜವನ್ನು ಕಟ್ಟಿಕೊಂಡು ವಾಸಿಸಲು ಪ್ರಾರಂಭಿಸಿದ ಮೇಲೆ ಧರ್ಮ, ಜಾತಿ ಅದರಲ್ಲಿಯೂ ಒಳಪಂಗಡಗಳು ಆರಂಭವಾದವು. ರಾಮಾಯಣ, ಮಹಾಭಾರತ ಕಾಲದಿಂದ ಹಿಡಿದು ಆಧುನಿಕ ಕಾಲದವರೆಗೂ ಹಲವಾರು ಧಾರ್ಮಿಕ ಆಚರಣೆಗಳು, ಸಂಪ್ರದಾಯಗಳು ರೂಢಿಗತವಾಗಿ ಬರುತ್ತಿವೆ. ಐತಿಹಾಸಿಕವಾಗಿಯೂ ರಾಜರ ಆಳ್ವಿಕೆ ಪ್ರಾರಂಭವಾದಾಗಿನಿಂದಲೂ ಅವರ ಧಾರ್ಮಿಕ, ಸಾಮಾಜಿಕ ಆಚರಣೆಗಳು ಮುಂದುವರೆಯುತ್ತಿದ್ದವು. ವಿಷ್ಣು, ಕೃಷ್ಣ, ರಾಮ ಮೊದಲಾದ ಪೌರಾಣಿಕ, ಕಾಲ್ಪನಿಕ ಮಹಾನ್ ಪುರುಷರು ದೈವೀ ಸಂಭೂತರೆಂಬ ನಂಬಿಕೆ ಇನ್ನೂ ಅಚಲವಾಗಿದೆ.

ಆದರೆ ಆ ಮಹಾನ್ ಪುರುಷರು ಸಮಾಜದ ಬಗ್ಗೆ ಜನಸಾಮಾನ್ಯರ ಬಗ್ಗೆ ಹೇಗೆಲ್ಲಾ ಚಿಂತನೆ ಮಾಡಿದ್ದರು? ಆಗಿನ ಸಾಮಾಜಿಕ ಸ್ಥಿತಿ-ಗತಿ ಹೇಗಿತ್ತು ಎಂಬ ಅಂಶ ನಿಖರವಾಗಿ ತಿಳಿಯುವುದೇ ಇಲ್ಲ. ಸಾಹಿತ್ಯಿಕವಾಗಿಯೂ ಐತಿಹಾಸಿಕವಾಗಿಯೂ ಅವರ ಯುದ್ಧ, ಜಯ-ಅಪಜಯ, ದಾನ-ದತ್ತಿ ಇವುಗಳ ವರ್ಣನೆಯೇ ಇರುತ್ತದೆಯೇ ವಿನಃ ಮುಖ್ಯ ವ್ಯಕ್ತಿಯೇ ಪ್ರಧಾನವಾಗುತ್ತಾನೆಯೇ ಹೊರತು ಜನ ಸಾಮಾನ್ಯನ ಜೀವನವಲ್ಲ.

ಭಾರತೀಯ ಸಂಸ್ಕೃತಿಯೇ ಶ್ರೀಮಂತವಾದುದು ಅಷ್ಟೇ ಪುರಾತನವಾದುದು ಕೂಡ. ಮಹಾವೀರ, ಬುದ್ಧ, ಯೇಸು, ಪೈಗಂಬರ್, ಬಸವಣ್ಣ. ಹೀಗೆ ಜೈನ, ಬೌದ್ಧ, ಕ್ರೈಸ್ತ, ಇಸ್ಲಾಂ, ಸಿಖ್ ಧರ್ಮಗಳ ಸಮ್ಮಿಲನವಾಗಿದೆ. ವಿವಿಧತೆಯಲ್ಲಿ ಏಕತೆ ಸಾಧಿಸಿದೆ. ಒಂದೊಂದು ಧರ್ಮದ ಮಹಾನ್ ಪುರುಷರ ಕೊಡುಗೆಗಳು, ಚಿಂತನೆಗಳು ಅದ್ಭುತವಾದುದು ಎಂದು ಹೇಳಬಹುದು. ಪೌರಾಣಿಕವಾಗಿ ಋಷಿ, ಮುನಿಗಳ ಉಪದೇಶಗಳಿಗಿಂತ ಈ ಸಮಾಜ ಸುಧಾರಕರ ಚಿಂತನೆಗಳು ದಾರಿದೀಪವಾಗಿವೆ ಎನ್ನಬಹುದು. ಇವರ ಸಂದೇಶವೂ ಸಮಾಜದ ಪರವಾಗಿಯೇ ಜನಸಾಮಾನ್ಯರ ಪರವಾಗಿಯೇ.

ಕರ್ನಾಟಕದ ಉಜ್ವಲ ಇತಿಹಾಸದ ಒಂದು ಮಹಾನ್ ಕಾಲಘಟ್ಟವೆಂದರೆ ವಚನಯುಗ. ಧಾರ್ಮಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಸಾಹಿತ್ಯಿಕವಾಗಿ ಅದ್ಭುತ ಕೊಡುಗೆ ನೀಡಿದ ಯುಗ. ವಚನಕಾರರ ಕೊಡುಗೆ ಸಮಾಜದ ಪರವಾದದ್ದು. ಶತಮಾನಗಳಿಂದ ಬಂದಿದ್ದ ಮೌಢ್ಯ, ಶೋಷಣೆ, ಅನ್ಯಾಯ, ಅರಾಜಕತೆ, ದಬ್ಬಾಳಿಕೆ,

ಅವೈಜ್ಞಾನಿಕತೆಯ ವಿರುದ್ಧ ದನಿಯೆತ್ತಿದ ಯುಗವಾಗಿದೆ. ಜನಸಾಮಾನ್ಯರ ಭಾವನೆಗಳಿಗೆ ದನಿಯಾದ ಯುಗವಾಗಿದೆ.

ಕನ್ನಡದ ಸೇನಾನಿ, ಸವ್ಯಸಾಚಿ ಎಂದೇ ಹೆಸರಾದ ದೇಜಗೌ ಅವರು ವಚನ ಸಾಹಿತ್ಯ ಕುರಿತು ಮಾಡಿರುವ ಸಂಶೋಧನೆ ಅದ್ಭುತವಾದುದು ಎಂದೇ ಹೇಳಬಹುದಾಗಿದೆ. ವಚನ ಸಾಹಿತ್ಯ ಕುರಿತು ಏಕಮುಖಿಯಾಗಿ ಚಿಂತಿಸದ ಅವರು ಬಹುಮುಖಿ ದೃಷ್ಟಿಕೋನಗಳಿಂದ ಆಳವಾದ ಅಧ್ಯಯನ ಮಾಡಿದ್ದಾರೆ. ವಚನಯುಗದ ಪ್ರಮುಖ ಘಟನೆಗಳು, ಕೊಡುಗೆಗಳು ಮಾತ್ರವಲ್ಲದೆ ಆ ಯುಗದ ಹಿಂದಿನ ಮುಂದಿನ ಯುಗಗಳ ಚಿತ್ರಣವನ್ನು ನೀಡುತ್ತಾರೆ. ವೈಜ್ಞಾನಿಕವಾಗಿ, ವೈಚಾರಿಕವಾಗಿ, ಸಮಾಜಮುಖಿಯಾಗಿ ವಚನಗಳ ಧೋರಣೆಗಳೇನು ಎಂಬುದನ್ನು ದೇಜಗೌ ಅವರು ಮನದಟ್ಟು ಮಾಡಿಸಿದ್ದಾರೆ. ವಚನ ಸಾಹಿತ್ಯ ವಿಶ್ವವ್ಯಾಪಿಯಾದುದು ಎಂಬ ಅಂಶ ಅವರ ವಚನ ಸಾಹಿತ್ಯ ಕುರಿತಾದ ಕೃತಿಗಳಿಂದ ತಿಳಿದುಬರುತ್ತದೆ.

ಕತ್ತಲೆ ತುಂಬಿರುವ ಸಮಾಜಕ್ಕೆ ವಚನಗಳು ಹೇಗೆ ಅರಿವಿನ ಕಿರಣ ಬೀರುತ್ತವೆ ಎಂಬ ವಿಚಾರವನ್ನು ಹಿಂದೂ ಧರ್ಮದ ಧೋರಣೆಗಳೊಡನೆ ಅಲ್ಲದೆ ಕ್ರೈಸ್ತ, ಇಸ್ಲಾಂ ಧಾರ್ಮಿಕ ಚಿಂತನೆಗಳೊಂದಿಗೆ ಅಲ್ಲದೆ ಪಾಶ್ಚಾತ್ಯ ಚಿಂತನೆಗಳೊಂದಿಗೆ ತುಲನಾತ್ಮಕವಾಗಿ ವಿವರಿಸಿದ್ದಾರೆ. ವಚನಸಾಹಿತ್ಯವನ್ನು ಎಲ್ಲಾ ದಿಕ್ಕಿನಿಂದಲೂ ದರ್ಶನ ಮಾಡಿಸಿದ್ದಾರೆ.

"ವಚನಕಾರರು ಹಿಂದಿನ ಕವಿಗಳಂತೆ ವಂದಿಮಾಗಧರಲ್ಲ, ರಾಜಮಹಾರಾಜರನ್ನು ಇಂದ್ರ ಚಂದ್ರ ದೇವೇಂದ್ರರೆಂದು ಹೊಗಳಿದವರಲ್ಲ, ಸೃಷ್ಟಿಕಾರಣವಾಗಿ, ಸಚರಾಚರವಸ್ತುಗಳಲ್ಲಿ ನೆಲೆಸಿರುವ ಪರಂಜ್ಯೋತಿಯ ಉಪಾಸನೆಯೇ ಅವರ ಜೀವನ ಧ್ಯೇಯವಾಗುತ್ತದೆ"[೧]

ಲೇಖಕರ ಈ ಅಭಿಪ್ರಾಯದಂತೆ ಪುರಾಣ ಪುರುಷರು ಐತಿಹಾಸಿಕ ಪುರುಷರನ್ನು ಹೊಗಳುವುದು, ರಂಜನೀಯವಾಗಿ ಕಾವ್ಯರಚಿಸುವುದು, ವಚನಕಾರರಿಗೆ ಬೇಕಾಗಿರಲಿಲ್ಲ. ಸಮಾಜದ ಸುಧಾರಣೆ ಅವರಿಗೆ ಮುಖ್ಯವಾಗಿತ್ತು ಎಂಬ ಅಂಶವು ನಮಗೆ ತಿಳಿದುಬರುತ್ತದೆ. ಇಡೀ ಪ್ರಭುತ್ವವನ್ನೇ ಪ್ರಶ್ನಿಸುವ ವೈದಿಕ ಸಾಹಿತ್ಯಕ್ಕೆ ಪ್ರತಿಕ್ರಿಯೆಯಾಗಿ ವಚನ ರಚನೆಯಾಯಿತು ಎಂಬ ಅಂಶವನ್ನು ದೇಜಗೌ ಅವರ ವಿಚಾರಗಳಿಂದ ಗುರುತಿಸಬಹುದು. ವಚನ ಚಳುವಳಿ ಮೇಲುನೋಟಕ್ಕೆ ಧಾರ್ಮಿಕ ವಿಷಯಕ್ಕೆ ಸಂಬಂಧಪಟ್ಟ ಚಳುವಳಿಯಾಗಿ ಕಂಡುಬಂದರೂ ಅದರ ಆಳದಲ್ಲಿ ಧರ್ಮ ಮಾತ್ರವಲ್ಲದೆ ಇನ್ನೂ ಅನೇಕ ಪ್ರಮುಖ ಅಂಶಗಳು ಅಡಕಗೊಂಡಿವೆ. ಈ ಎಲ್ಲಾ

ವಿಚಾರಗಳನ್ನು ದೇಜಗೌ ಅವರು ಹೆಕ್ಕಿ ತೆಗೆದಿದ್ದಾರೆ. ಅವರ ಸಂಶೋಧನೆ ಇಡೀ ವಚನಸಾಹಿತ್ಯದ ಪ್ರಾಮುಖ್ಯವನ್ನು ಎತ್ತಿಹಿಡಿಯುತ್ತದೆ.

ದೇಜಗೌ ಅವರು ವಚನಗಳು ಸಮಾಜವಾದವನ್ನು ಹೇಗೆ ಬಿಂಬಿಸುತ್ತವೆ ಎಂಬ ವಿಚಾರವನ್ನು ತಿಳಿಸುವ ಮೊದಲು ಆಧುನಿಕ ಸಮಾಜವಾದ ಹುಟ್ಟು, ಬೆಳವಣಿಗೆ ಬಗ್ಗೆ ಪರಿಚಯಿಸುತ್ತಾರೆ. ಆಧುನಿಕ ಸಮಾಜವಾದದ ಚಿಂತನೆಗಳು ವಚನಕಾರರ ಚಿಂತನೆಗಳೊಂದಿಗೆ ಹೇಗೆ ಬೆರೆತುಹೋಗಿವೆ. ಅವರ ಯೋಜನೆಗಳು ಆಗಲೇ ವಚನಕಾರರ ಯೋಜನೆಗಳಾಗಿತ್ತು ಎಂಬ ವಿಚಾರವನ್ನು ಉದಾಹರಣೆಗಳ ಮೂಲಕ ಅರ್ಥಮಾಡಿಸಿದ್ದಾರೆ. ಈ ಆಧುನಿಕ ಸಮಾಜವಾದದ ಕಲ್ಪನೆ ಬಂದದ್ದೆ ಪಾಶ್ಚಾತ್ಯರಿಂದ ಭಾರತೀಯರಲ್ಲಿ ಎಷ್ಟೆಲ್ಲಾ ಜ್ಞಾನ, ಸಂಪತ್ತುಗಳಿದ್ದರೂ ಅದು ಹೊರಬರುವುದೇ ಪಾಶ್ಚಾತ್ಯರಿಂದ 'ಸೋಷಿಯಲಿಸಂ' ಎಂಬ ಪದ ಸಮಾಜವಾದಕ್ಕೆ ಸಮನಾಗಿರುವ ಪದ. ಇದು ಮೊದಲು ಚಾಲ್ತಿಗೆ ಬಂದದ್ದು ೧೮೦೩ರಲ್ಲಿ ಇಟಲಿಯಲ್ಲಿ. ೧೮೨೭ರಲ್ಲಿ ರಾಬರ್ಟ್ ಓವೆನ್ನನ ಅನುಯಾಯಿಗಳನ್ನು ಗುರುತಿಸುವ ಸಲುವಾಗಿ 'ಸೋಷಿಯಲಿಸ್ಟ್' ಎಂಬ ಪದವನ್ನು ಬಳಸಲಾಯಿತು. ಆಗಿನ ಸಮಾಜದಲ್ಲಿದ್ದ ಏಕಸ್ವಾಮ್ಯನೀತಿ, ಊಳಿಗಮಾನ್ಯ ಪದ್ಧತಿಯ ವಿರುದ್ಧವಾಗಿ ಹೋರಾಟ ಆರಂಭವಾಯಿತು. ಸಮಾಜದಲ್ಲಿ ಸಮಾನತೆ ತರುವಲ್ಲಿ ಕೈಗಾರಿಕೆಗಳ ಸ್ಥಾಪನೆ ಮುಖ್ಯವಾಗಿತ್ತು. ಆರ್ಥಿಕ ಸಬಲತೆ ಸಾಧಿಸಲು ಪ್ರಯತ್ನಿಸಲಾಗಿತ್ತು. ವಿವಿಧ ಪಾಶ್ಚಾತ್ಯ ಸಮಾಜವಾದಿ ಚಿಂತಕರ ಅಭಿಪ್ರಾಯಗಳೊಂದಿಗೆ ಸೂಚ್ಯವಾಗಿ ದೇಜಗೌ ಅವರು ವಚನಗಳಲ್ಲಿ ಸಮಾಜವಾದವನ್ನು ಅರ್ಥಮಾಡಿಸಿದ್ದಾರೆ.

- ಸೇಯಿಂಟ್ ಸೈಮೋನಿಯನ್ (೧೭೬೦–೧೮೨೫) – ವೈಜ್ಞಾನಿಕ ಪ್ರಗತಿ, ಬೃಹತ್ ಕೈಗಾರಿಕೆಗಳ ಸ್ಥಾಪನೆ ಮತ್ತು ಉತ್ಪನ್ನಕಾರರ ರಾಜಕೀಯಾಧಿಕಾರದ ಮೂಲಕ ಬಹುಜನರ ಕ್ಷೇಮವನ್ನು ಸಾಧಿಸಬಹುದು.
- ಚಾರ್ಲ್ಸ್ ಫೋರಿಯರ್ (೧೭೭೨–೧೮೩೭) – ವಿವಿಧ ವೃತ್ತಿ ಸ್ವೀಕರಣ, ಲಾಭೋದ್ದೇಶವಿಲ್ಲದ ಉತ್ಪನ್ನ, ವ್ಯವಸಾಯ ಹಾಗೂ ಮೈತ್ರಿ ಸೌಹಾರ್ದಗಳ ಮೂಲಕ ಮಾನವ ಕಲ್ಯಾಣ ಸಾಧ್ಯ.
- ರಾಬರ್ಟ್ ಓವೆನ್ (೧೭೭೧–೧೮೫೮) – ಸಹಕಾರ ತತ್ವದ ಆಧಾರದ ಮೇಲೆ ಕೃಷಿಕೈಗಾರಿಕೆಗಳ ಸಮನ್ವಯವನ್ನೂ ಪ್ರಗತಿಯನ್ನೂ ಸಾಧಿಸಬೇಕು.

- ಫರ್ಡಿನೆಂಡ್ ಲಾಸಲೆ (೧೮೨೫-೧೮೬೪) – ಹುಟ್ಟುವಳಿಗೆ ಕಾರಣರಾದ ಕಾರ್ಮಿಕರೇ ಅದಕ್ಕೆ ಪೂರ್ಣ ಹಕ್ಕುದಾರರಾಗಬೇಕು.

- ಸಿಸ್‌ಮಾಂಡೆ ಡಿ ಸಿಸ್‌ಮಾಂಡೆ (೧೭೭೩-೧೮೪೨) – ಏಕಸ್ವಾಮ್ಯ ಮತ್ತು ಬಂಡವಾಳಗಾರಿಕೆಗಳು ನಿರುದ್ಯೋಗಾದಿ ಸಕಲ ಸಂಕಟಗಳಿಗೆ ಕಾರಣವೆಂದೂ, ಕನಿಷ್ಠ ವೇತನ ಮತ್ತು ಸಾಮಾಜಿಕ ಭದ್ರತೆಗಳ ಪೂರೈಕೆ ಸರ್ಕಾರದ ಕರ್ತವ್ಯವೆಂದೂ ಅಭಿಪ್ರಾಯಪಡುತ್ತಾರೆ"[೨]

ಇನ್ನೂ ಹಲವಾರು ಪಾಶ್ಚಾತ್ಯ ಚಿಂತಕರ ವ್ಯಾಖ್ಯೆಗಳೊಂದಿಗೆ ಅರ್ಥಮಾಡಿಸಿದ್ದಾರೆ. ಅಷ್ಟೇ ವಿವೇಚನೆಗೂ ಹಚ್ಚುತ್ತಾರೆ. ಅಷ್ಟು ವಿಶಾಲವಾಗಿದೆ ದೇಜಗೌ ಅವರ ಅಧ್ಯಯನ ವ್ಯಾಪ್ತಿ. ಇದರ ಫಲವಾಗಿಯೇ ವಚನಗಳ ಸಮಗ್ರ ಅಧ್ಯಯನ ಸಾಧ್ಯವಾಗಿದೆ. ಎಲ್ಲಾ ದೇಶಗಳಲ್ಲಿಯೂ ತಾರತಮ್ಯ ಇದ್ದೇ ಇರುತ್ತದೆ. ಆದರೆ ನಮ್ಮ ಭಾರತೀಯರಿಗಿಂತ ಪಾಶ್ಚಾತ್ಯ ಚಿಂತಕರು ಬಹುಬೇಗ ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ. ಈ ವ್ಯಾಖ್ಯೆಗಳನ್ನೆಲ್ಲಾ ಗಮನಿಸಿದಾಗ ಸಂಪತ್ತು ಏಕವ್ಯಕ್ತಿಯ ಅಧೀನದಲ್ಲಿದ್ದಾಗ ಸಮಸ್ಯೆಗಳು ಉದ್ಭವಿಸುವುದು ಸಹಜ. ಸಮನಾಗಿ ಹಂಚಿಕೆಯಾದಾಗ ಮಾತ್ರ ಆರ್ಥಿಕ ಸಬಲವಾಗಲು ಸಾಧ್ಯ ಎಂಬ ವಿಚಾರವನ್ನು ದೇಜಗೌ ಅವರು ಮನದಟ್ಟು ಮಾಡಿಸಿದ್ದಾರೆ.

ಕಾರ್ಮಿಕ – ಬಂಡವಾಳಗಾರರ ಅಂತರ, ಶ್ರೀಮಂತ-ಮಾಧ್ಯಮ ವರ್ಗದವರ ಆರ್ಥಿಕ ಅಸಮಾನತೆ ಇವೆಲ್ಲದರ ವಿರುದ್ಧ ಸಮಾಜವಾದ ತತ್ವದ ಚಿಂತಕರು ಪ್ರತಿಪಾದಿಸುತ್ತಾರೆ. "ಸಮಾಜವಾದ ವೈಜ್ಞಾನಿಕವಾಗಿರದೆ ವಿಮರ್ಶಾತ್ಮಕವಾಗಿ ಇರಬೇಕೆಂಬುದು ಹಾಗೂ ಕ್ರಾಂತಿಕಾರಕವಾಗಿರದೆ ವಿಕಾಸಾತ್ಮಕವಾಗಿರಬೇಕೆಂಬುದು ಜರ್ಮನಿಯ ಎಡ್ವರ್ಡ್ ಬರ್ನ್‌ಸ್ಟೀನ್ (೧೮೫೦-೧೯೩೨)ನ ಮತ ಕೇವಲ ತಾತ್ತ್ವಿಕ ಸಿದ್ಧಾಂತಗಳು ಮುಖ್ಯವಲ್ಲ, ಘಟನೆಗಳು ಸಮಾಜವಾದದ ಗತಿಯನ್ನು ನಿರ್ಧರಿಸಬೇಕೆಂಬುದು ಇತರ ಜರ್ಮನ್ ಪರಿಷ್ಕರಣವಾದಿಗಳ ಅಭಿಪ್ರಾಯ"[೩]

ಇಟಲಿ, ಫ್ರಾನ್ಸ್, ಜರ್ಮನ್, ರಷ್ಯಾ ಯಾವುದೇ ದೇಶದ ಚಿಂತಕರಿರಬಹುದು. ಅವರ ಅಭಿಪ್ರಾಯಗಳು ಬೇರೆಯಾದರೂ ಉದ್ದೇಶ ಒಂದೇಯಾಗಿದೆ. ದೇಜಗೌ ಅವರು ಮುಖ್ಯವಾಗಿ ೧೯೧೭ರ ರಷ್ಯಾ ಕ್ರಾಂತಿ ಶೋಷಿತ ಪರವಾದ ಕ್ರಾಂತಿಯಾಗಿತ್ತು ಎಂದು ಅಭಿಪ್ರಾಯಪಡುತ್ತಾರೆ. ಇದು ವಚನ ಚಳುವಳಿಯನ್ನು ನೆನೆಪಿಸುತ್ತದೆ. ವಚನಕರರದು ಶೋಷಿತ ಪರವಾದ ಹೋರಾಟವೇ. ಇದೇ ಮಾದರಿಯ ಚಿಂತನೆ

ಪಾಶ್ಚಾತ್ಯ ಸಮಾಜವಾದಿ ಚಿಂತಕರಲ್ಲಿ ಗುರುತಿಸಿದರೆ, ಪಾಶ್ಚಾತ್ಯ ಚಿಂತಕರ ಮಾದರಿಯಿಂದ ಆಧುನಿಕ ಭಾರತೀಯ ಸಮಾಜವಾದಿ ಪ್ರತಿಪಾದಕರು ಪ್ರೇರೇಪಿತರಾಗಿದ್ದಾರೆ. ಜವಾಹರಲಾಲ್‌ನೆಹರು ಮೊದಲಾದವರು ಸ್ಫೂರ್ತಿ ಪಡೆದಿದ್ದಾರೆ. ೧೯೨೪ರಲ್ಲಿ ಭಾರತೀಯ ಕಮ್ಯುನಿಸ್ಟ್ ಪಕ್ಷ ಸ್ಥಾಪನೆಯಾದುದು ಜೊತೆಗೆ ವೀರೇಂದ್ರನಾಥ ಚಟ್ಟೋಪಾಧ್ಯಾಯ, ಭೂಪೇಂದ್ರನಾಥದತ್, ಗುರುಮುಖ್‌ಸಿಂಗ್ ಮೊದಲಾದವರು ಇದರ ಧ್ಯೇಯೋದ್ದೇಶಗಳಿಗೆ ಹೇಗೆ ಪ್ರಾಮಾಣಿಕವಾಗಿ ಸ್ಪಂದಿಸುತ್ತಾರೆ ಹಾಗೂ ಕಾಲಕ್ರಮೇಣ ರಾಜಕೀಯ ಪ್ರಭಾವಕ್ಕೊಳಗಾಗಿ ಬಹಳ ಬೇಗ ಇದರ ಹೋರಾಟದ ವೇಗ ಕುಂಠಿತವಾದ ಚಿತ್ರಣವನ್ನು ದೇಜಗೌ ವಿವರಿಸಿದ್ದಾರೆ. ಇದನ್ನೆಲ್ಲಾ ತಿಳಿದಾಗ ವಚನಕಾರರಿಗಿದ್ದ ಮನೋಸ್ಥೈರ್ಯ, ಆತ್ಮವಿಶ್ವಾಸ ಆಧುನಿಕರಲ್ಲಿ ಕಡಿಮೆಯಾಯಿತೇನೋ ಎಂದೆನಿಸುತ್ತದೆ.

ದೇಜಗೌ ಅವರು ಪ್ರಪಂಚದ ಮೊಟ್ಟಮೊದಲ ಸಮಾಜವಾದಿಗಳೆಂದರೆ ಶರಣರು ಎಂದು ಅಭಿಪ್ರಾಯಪಡುತ್ತಾರೆ. ಪ್ರಭುಗಳ ದರ್ಪಕ್ಕೆ ನಲುಗಿಹೋಗಿದ್ದ ಶೋಷಿತವರ್ಗ, ಜಾತಿತಾರತಮ್ಯ, ಸ್ತ್ರೀ ಶೋಷಣೆ, ಆರ್ಥಿಕ ಅಸಮಾನತೆಯ ವಿರುದ್ಧವಾಗಿ ಕಂಡು ಬಂದ ಹೋರಾಟ ಮೇಲ್ವರ್ಗದವರ ಕುತಂತ್ರವನ್ನು ಹೀಯಾಳಿಸಿತು. ಕಾಯಕದ ಆಧಾರದ ಮೇಲೆ ವೃತ್ತಿ ಗೌರವ ಕೊಡಲಾರಂಭಿಸಿತು. ಶೋಷಿತರ ಪರವಾಗಿದ್ದ ಹೋರಾಟ ಸ್ತ್ರೀ ಸಮಾನತೆಯನ್ನು ಸಾರಿತು. ಪುರುಷನಷ್ಟೇ ಹಕ್ಕುದಾರಳು ಎಂಬ ಸತ್ಯವನ್ನು ಅಜ್ಞಾನಿಗಳಿಗೆ ಮನವರಿಕೆ ಮಾಡಿತು. ದೇವರನ್ನು ನಿರಾಕರಿಸದೆ, ದೇವಾಲಯ ನಿರ್ಮಾಣವನ್ನು ನಿರಾಕರಿಸದೆ ದೇಹವೇ ದೇಗುಲವಾಗಬೇಕೆಂಬ ಶರಣರ ತತ್ವವನ್ನು ಪುರಸ್ಕರಿಸಿ ದೇಜಗೌ ಅವರು ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಶತಮಾನಗಳ ಅಂತರವಿರುವ, ದೇಶ-ದೇಶಗಳ ಅಂತರವಿರುವ ಬಸವಣ್ಣ-ಕಾರ್ಲ್‌ಮಾರ್ಕ್ಸ್‌ರ ಚಿಂತನೆಗಳನ್ನು ಸಮಾಜವಾದದ ನೆಲೆಯಲ್ಲಿ ದೇಜಗೌ ಗುರುತಿಸಿದ್ದಾರೆ. ಇನ್ನೂ ವಿಜ್ಞಾನ ಕಣ್ತೆರೆಯದಿದ್ದ, ಮತ-ಮಠ ಮಠಾಧೀಶ್ವರರ ಕೈ ಮೇಲಾಗಿದ್ದ ಹನ್ನೆರಡನೆಯ ಶತಮಾನ, ಅಂಧಕಾರದ ಯುಗ ತೊಲಗಿ, ವಿಜ್ಞಾನ-ತಂತ್ರಜ್ಞಾನಗಳು ವ್ಯಾಪಕವಾಗಿ ಹರಡಿ, ಕೈಗಾರಿಕಾ ಕ್ರಾಂತಿ ಸರ್ವತೋಮುಖವಾಗಿ ವ್ಯಾಪಿಸಿಕೊಳ್ಳುತ್ತಿದ್ದ ಹತ್ತೊಂಬತ್ತನೆಯ ಶತಮಾನ"[೪]

ದೇಜಗೌ ಅವರ ಈ ಮಾತನ್ನು ಓದುವಾಗಲೇ ಬಸವಣ್ಣ ಕಾರ್ಲ್‌ಮಾರ್ಕ್ಸ್‌ರ ಯುಗಯುಗಗಳ ಅಂತರ, ಆ ಶತಮಾನಗಳ ಸಾಮಾಜಿಕ ಚಿತ್ರಣ

ಮನವರಿಕೆಯಾಗುತ್ತದೆ. ಈ ಇಬ್ಬರು ಮಹಾನ್ ವ್ಯಕ್ತಿಗಳ ಅಭಿಪ್ರಾಯಗಳು ಬೇರೆಯಾಗಿದ್ದರೂ ಉದ್ದೇಶ ಒಂದೇ ಆಗಿತ್ತು. 'ಕಾಯಕವೇ ಕೈಲಾಸ' ಎಂದು ಬಸವಣ್ಣನವರು ಸಾರಿದರೆ, ಜಗತ್ತಿನ ಕಾರ್ಮಿಕರೆಲ್ಲಾ ಒಗ್ಗಟ್ಟಾಗಬೇಕೆಂದು ಕಾರ್ಲ್‌ಮಾರ್ಕ್ಸ್‌ನ ಅಭಿಪ್ರಾಯ. ಸರ್ವಸ್ವಾತಂತ್ರ್ಯಕ್ಕೆ ಪುರುಷನಂತೆ ಸ್ತ್ರೀಯೂ ಕೂಡ ಅರ್ಹಳು. ಕಾಯಕ ದಾಸೋಹಗಳೇ ಸಾಮಾಜಿಕ ಆರ್ಥಿಕ ಅಭಿವೃದ್ಧಿಗೆ ಮೂಲ, ದೇವನೊಬ್ಬ, ನಾಮಹಲವು, ಪ್ರಜಾಪ್ರಭುತ್ವ ರಾಜಕೀಯ ನೀತಿಯಾಗಬೇಕೆಂಬುದು ಬಸವಣ್ಣನವರ ನಿಲುವಾದರೆ, ವೈಜ್ಞಾನಿಕ ಅರಿವು ಮುಖ್ಯ, ಸಮಾಜದ ಪ್ರಬಲ ಆರ್ಥಿಕ ವ್ಯವಸ್ಥೆಗೆ ಬಂಡವಾಳಗಾರರಷ್ಟೇ ಕಾರ್ಮಿಕರದ್ದು ಶ್ರೇಷ್ಠ ಪಾಲು, ಚೈತನ್ಯ, ಚಲನೆ, ವಿಕಾಸ ಜಗತ್ತಿನ ಪ್ರತಿಯೊಂದು ಭೌತವಸ್ತುವಿನಲ್ಲಿಯೂ ಕಾಣಬಹುದಾದ ಸಹಜಗುಣ ಎಂದು ಕಾರ್ಲ್‌ಮಾರ್ಕ್ಸ್‌ರು ಅಭಿಪ್ರಾಯಪಡುತ್ತಾರೆ. ದೇಜಗೌ ಅವರು ಈ ಇಬ್ಬರ ವಿಚಾರಗಳನ್ನು ಮನದಟ್ಟು ಮಾಡಿಸಿದ್ದಾರೆ.

ದೇಜಗೌ ಅವರು ವಚನ ಸಾಹಿತ್ಯದ ಆಳವಾದ ಅಧ್ಯಯನದ ಮೂಲಕ ಪಾಶ್ಚಾತ್ಯ ಚಿಂತಕರ ವಿಚಾರಗಳು, ಭಾರತೀಯ ಚಿಂತನೆಗಳೊಂದಿಗೆ ವಿವರಿಸಿರುವುದು ವಚನಗಳಲ್ಲಿ ಅಡಕವಾಗಿರುವ ಸಮಾಜವಾದ ಅಂಶಗಳನ್ನು ಹೊರತೆಗೆಯಲು ಎಂಬ ಅಂಶ ಮನವರಿಕೆಯಾಗುತ್ತದೆ. ವಚನಕಾರರು ಸಮಾಜಶಾಸ್ತ್ರಜ್ಞರಾಗಿ ರೋಗಗ್ರಸ್ಥ ಸಮಾಜಕ್ಕೆ ಉಪಯುಕ್ತವಾದ ಮಾಹಿತಿ ನೀಡುತ್ತಾರೆ. ಸಮಾಜವನ್ನು ಸರಿಮಾಡಲು ಯಾವುದೇ ಅಸ್ತ್ರಗಳನ್ನಿಟ್ಟುಕೊಂಡು ಹೋರಾಡದೆ ಸಾಹಿತ್ಯ ರಚನೆಯ ಮೂಲಕ ಕ್ರಾಂತಿ ಮಾಡಿರುವುದು, ಮನುಷ್ಯನ ನಡವಳಿಕೆಯನ್ನು, ಆಲೋಚನೆಗಳನ್ನು ಅರ್ಥಮಾಡಿ-ಕೊಂಡಿರುವುದು ಯಾವ ಮನೋವಿಜ್ಞಾನಿಗೂ ಕಡಿಮೆಯಿಲ್ಲ ಎನಿಸುವುದು.

ಮೊದಲೇ ತಿಳಿಸಿರುವಂತೆ ದೈವದ, ದೇವಾಲಯದ ಕಲ್ಪನೆಯೇ ಬೇರೆಯಾಗಿದ್ದ ವಚನಕಾರರಲ್ಲಿ ಅಂದೂ ಕೂಡ ಪುರೋಹಿತಶಾಹಿವರ್ಗದ ದಬ್ಬಾಳಿಕೆಗೆ ಕೆಳವರ್ಗದ ಜನ ನಲುಗಿ ಹೋಗಿದ್ದರು. ದೇವಸ್ಥಾನ ವ್ಯವಸ್ಥೆ ಶೋಷಣೆಯ ಕೇಂದ್ರವಾಗಿತ್ತು. ಗುರುಕುಲಗಳಿಗೆ ಹೋಗಿ ವಿದ್ಯೆ ಕಲಿಯುವ ಹಕ್ಕು, ಅವಕಾಶ ಅವರಿಗಿರಲಿಲ್ಲ. ೨೧ನೆಯ ಶತಮಾನದಲ್ಲಿಯೂ ಕೆಳವರ್ಗದವರೆನಿಸಿರುವ ದಲಿತರು ದೇವಾಲಯಗಳಿಗೆ ಪ್ರವೇಶಮಾಡಬಾರದೆಂಬ ನಿಯಮಗಳು ಕೆಲವು ಸ್ಥಳಗಳಲ್ಲಿ ಇನ್ನೂ ಜೀವಂತವಾಗಿದೆ. 'ಶಿವನೊಬ್ಬನೆ ದೈವ' ಎಂದು ವಚನಕಾರರು ಪ್ರತಿಪಾದಿಸಿದರು. ಶರಣರೆಲ್ಲಾ ಶಿವನ ಮಕ್ಕಳು ಎಂಬ ನಂಬಿಕೆ ಅವರದಾಗಿತ್ತು.

೧. ದೇವನೊಬ್ಬ, ನಾಮಹಲವು, ಪರಮ ಪತಿವ್ರತೆಗೆ
ಗಂಡನೊಬ್ಬ, ಮತ್ತೊಂದಕ್ಕೆರಗಿದರೆ
ಕಿವಿಮೂಗ ಕೊಯ್ವನು। ಹಲವು ದೈವದ ಎಂಜಲ
ತಿಂಬವರನೇನೆಂಬೆ ಕೂಡಲಸಂಗಮದೇವ

೨. ಲಿಂಗವ ಪೂಜಿಸಿ ಫಲವೇನಯ್ಯಾ
ಸಮರತಿ ಸಮಕಳೆ ಸಮಸುಖವನರಿಯದನ್ನಕ್ಕ ಎಂದು
ಬಸವಣ್ಣನವರು ಪ್ರಶ್ನಿಸುತ್ತಾರೆ.

ದೇಜಗೌ ಅವರು ಸಂದರ್ಭೋಚಿತವಾಗಿ ಈ ವಚನವನ್ನು ವಿವರಿಸುವುದರ ಮೂಲಕ ಶರಣರ ಸಮಾಜದ ದೈವದ ಕಲ್ಪನೆ ಹೇಗಿತ್ತು ಎಂಬುದನ್ನು ತಿಳಿಸಿಕೊಡುತ್ತಾರೆ. ಆದರೆ ಇಂದು ದೈವದ ಹೆಸರಿನಲ್ಲಿ ನಡೆಯುವ ಶೋಷಣೆ, ಅನ್ಯಾಯ, ದಬ್ಬಾಳಿಕೆ ಇವನ್ನೆಲ್ಲಾ ಗಮನಿಸಿದರೆ ಈ ಸಂದರ್ಭಧಲ್ಲಿ ವಚನಗಳ ಅರಿವು ತುಂಬಾ ಮುಖ್ಯ ಎಂದೆನಿಸುತ್ತದೆ. ತೋರಿಕೆಯ, ಆಡಂಬರದ, ಸ್ವಾರ್ಥದ ಭಕ್ತಿಗಿಂತ ಸಮರಸ, ಸಹಕಾರ, ಸಹಬಾಳ್ವೆಯ ಬದುಕು ಬೇಕೆನಿಸುತ್ತದೆ.

ಋಷಿ, ಮುನಿಗಳ ಕಾಲದಲ್ಲಿ ಧ್ಯಾನ, ತಪಸ್ಸುಗಳಿಗೆ ಮಹತ್ವವಿತ್ತು. ಅದು ಅಷ್ಟೇ ಸಕಾರಾತ್ಮಕ ಫಲಿತಾಂಶಗಳನ್ನು ನೀಡುತ್ತದೆ ಕೂಡ. ಮುಕ್ತಿ ಪಡೆಯಲು ಇದೊಂದು ಪವಿತ್ರ ಮಾರ್ಗ ಎಂದು ನಂಬಲಾಗಿತ್ತು. ಒಂದೇ ಕಡೆ ಕುಳಿತು ಉಪದೇಶಮಾಡುವ ಬದಲು ಜಂಗಮ ತತ್ವವನ್ನು ಪಾಲಿಸಿದವರು ಶರಣರು. "ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ" ಎಂಬ ಮಾತಿನಂತೆ ಚಟುವಟಿಕೆಯಿಲ್ಲದಿದ್ದರೆ ಜೀವಂತ ವಸ್ತು ಕೂಡ ಜಡವಾಗುತ್ತದೆ. ಚಲನಶೀಲತೆಯಿಂದ ಕೂಡಿದ್ದರೆ ಕ್ರಿಯಾಶೀಲತೆಯಿರುತ್ತದೆ. 'ದೇಶ ಸುತ್ತು, ಕೋಶ ಓದು' ಎಂಬ ಆಧುನಿಕರ ಮಾತಿನಂತೆ ಹೊಸ ವಿಚಾರಧಾರೆಗಳು ನಮ್ಮ ಅರಿವಿಗೆ ಬರುತ್ತವೆ. ಈ ಅಂಶವನ್ನು ದೇಜಗೌ ಅವರು ವಚನಕಾರರಲ್ಲಿ ಗುರುತಿಸಿದ್ದಾರೆ. "ಅರಿಷಡ್ವರ್ಗಗಳನ್ನು ಗೆದ್ದು, ಸರ್ವಸಂಗ ಪರಿತ್ಯಾಗಿಯಾದ ಪರಿವ್ರಾಜಕ ಸನ್ಯಾಸಿಯೇ ಜಂಗಮ, ಅವನು ಪರಶಿವನ ಸಾಕಾರರೂಪ. ಅವನಿಗೆ ಮನೆಮಠಗಳಿಲ್ಲ, ಊರಿಂದೂರಿಗೆ ಅಲೆಯುತ್ತ, ಭಿಕ್ಷಾನ್ನದಿಂದ ಬಾಳು ಹೊರೆಯುತ್ತ, ಭಕ್ತರು ಎಡವದಂತೆ, ಜಾರದಂತೆ ಎಚ್ಚರಿಸುತ್ತ, ಅವರು ಕೊಟ್ಟ ಸಂಪತ್ತನ್ನು ಇಲ್ಲದವರಿಗೆ ನೀಡುತ್ತ, ಕೀಳುಮೇಲುಗಳ ಅಂತರವನ್ನು ತೊಡೆಯುತ್ತ, ಸಮಾಜದಲ್ಲಿ

ಸಮತೋಲನವನ್ನು ಕಾಪಾಡುವ ಮೂಲಕ ಶಾಂತಿ ಸ್ಥಾಪನೆಗೆ ಜಗತ್ತಿನ ಕಲ್ಯಾಣ ಸಾಧನೆಗೆ ನೆರವಾಗುತ್ತಾನೆ."[೬]

ದೇಜಗೌ ಅವರು ಸೋದಾಹರಣವಾಗಿ ಜಂಗಮರ ಲಕ್ಷಣಗಳನ್ನು, ಜೀವನಶೈಲಿಯನ್ನು ವಿವರಿಸಿದ್ದಾರೆ. ಇದನ್ನೆಲ್ಲಾ ಓದಿದಾಗ ಆಧುನಿಕ ಮಠಾಧೀಶರ ಜೀವನಶೈಲಿ ಇಷ್ಟೊಂದು ಅರ್ಪಣಾಭಾವದಿಂದ ಇದೆಯೇ ಎಂಬ ಪ್ರಶ್ನೆ ಮೂಡುತ್ತದೆ. ಸಮಾಜದ ಅಭ್ಯುದಯವೇ ಜಂಗಮರ ಉದ್ದೇಶವಾಗಿತ್ತು.

೧೨ನೆಯ ಶತಮಾನದಲ್ಲಾದ ಇನ್ನೊಂದು ಹಿರಿಮೆ ಅನುಭವ ಮಂಟಪದ ಸ್ಥಾಪನೆ. ನಾವು ಇಂದು ಒಬ್ಬ ಸಮರ್ಥ ಆಡಳಿತಗಾರರನ್ನು ಚುನಾಯಿತ ಪ್ರತಿನಿಧಿಯಾಗಿ ಜನಸಾಮಾನ್ಯರ ಸಮಸ್ಯೆಗಳ ಪರಿಹಾರಕ್ಕೆ ಪಾರ್ಲಿಮೆಂಟ್ ಭವನಕ್ಕೆ ಕಳುಹಿಸಿ ನಮ್ಮ ಸಮಸ್ಯೆಗಳಿಗೆ ಸರಿಯಾದ ಸ್ಪಂದನೆ ದೊರೆತರೆ ಪರಿಹಾರ ಪಡೆಯುವೆವೋ ಬಿಡುವೆವೋ ಗೊತ್ತಿಲ್ಲ. ಆದರೆ ಸಮಸ್ಯೆಗಳಂತೂ ಚರ್ಚೆಯಾಗುತ್ತವೆ. ಆದರೆ ೧೨ನೆಯ ಶತಮಾನದಲ್ಲಿ ಸ್ಥಾಪನೆಯಾದ ಅನುಭವ ಮಂಟಪ ಎಲ್ಲಾ ಶೋಷಿತರ ಪರವಾದ ದನಿಗಳು ಕೇಳಿಬರುತ್ತಿದ್ದ ಸ್ಥಳವಾಗಿತ್ತು. ಸುಖಿರಾಜ್ಯದ, ಸಮಾಜದ ನಿರ್ಮಾಣ ವಚನಕಾರರದಾಗಿತ್ತು. "ಸರ್ವಸಮಾನತೆಯುಳ್ಳ ಸರ್ವ ಸ್ವಾತಂತ್ರ್ಯವನ್ನು ರಕ್ಷಿಸುವ, ಸರ್ವೋದಯವನ್ನುಪೇಕ್ಷಿಸುವ ಪ್ರಜಾಪ್ರಭುತ್ವದ ಅವರ ಗುರಿಯಾಗಿತ್ತೆಂಬುದು ಅನುಭವ ಮಂಟಪದ ಕಲ್ಪನೆಯಿಂದ ಸ್ಪಷ್ಟವಾಗುತ್ತದೆ"[೭]

ನಾವು ಇಂದು ಕಾಣುತ್ತಿರುವ ಪ್ರಜಾಪ್ರಭುತ್ವದ ತತ್ವಗಳು ಅಂದೇ ಶರಣರಲ್ಲಿತ್ತು ಎಂಬ ವಿಷಯವನ್ನು ದೇಜಗೌ ಅವರ ಅಭಿಪ್ರಾಯದಲ್ಲಿ ವ್ಯಕ್ತವಾಗುತ್ತದೆ. ಪ್ರಭುತ್ವಶಾಹಿ ಹಿಡಿತದಲ್ಲಿದ್ದ ಸಮಾಜದಲ್ಲಿ ಯಾರೊಬ್ಬರು ನಾಯಕನ ಪಟ್ಟಕ್ಕೆ ಆಸೆಪಡದೆ ಒಗ್ಗಟ್ಟಾಗಿ ಸ್ಥಾಪಿಸಿದ ಅನುಭವಮಂಟಪ, ಶೂನ್ಯಸಿಂಹಾಸನ ಇವೆಲ್ಲಾ ಇಂದಿನ ಸ್ವಾರ್ಥ, ಆಸೆಬುರುಕ ಅಧಿಕಾರಿಗಳಿಗೆ, ರಾಜಕೀಯ ನಾಯಕರಿಗೆ ಸೂಕ್ತ ಪಾಠದಂತಿದೆ.

ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ
ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ ಕೂಡಲ ಸಂಗಮದೇವ[೮]

ಬಸವಣ್ಣನವರ ವಚನದೊಂದಿಗೆ ದೇಜಗೌ ಅವರು ನಮ್ಮ ರಾಜಕೀಯ ನಾಯಕರ ನಡವಳಿಕೆಯನ್ನು ಬಿಂಬಿಸುತ್ತಾರೆ. ಒಂದು ಹೊತ್ತು ಅನ್ನವಿಲ್ಲದೆ ಪರದಾಡುತ್ತಿರುವ ಜನಸಾಮಾನ್ಯರ ಮಧ್ಯೆ ಅವರೇ ಆಯ್ಕೆಮಾಡಿ ಕಳಿಸಿದ ಜನನಾಯಕ

ಐಷಾರಾಮಿ ಹೋಟೆಲ್‌ಗಳಲ್ಲಿ, ವಿದೇಶಗಳಲ್ಲಿ ಕಾಲಕಳೆಯುವುದು ದುರ್ದೈವದ ಸಂಗತಿಯಾಗಿದೆ ಎಂದು ದೇಜಗೌ ಅವರು ಬೇಸರ ವ್ಯಕ್ತಪಡಿಸುತ್ತಾರೆ. "ತಮ್ಮ ಪೂರ್ವಾಶ್ರಮಗಳನ್ನು ಈಡಾಡಿ ಬಸವಣ್ಣನವರು ಪ್ರೀತಿ, ಸಮಾನತೆ, ಸಹೋದರತೆಗಳ ತಳಪಾಯದ ಮೇಲೆ ಕಟ್ಟಿದ್ದ ಅನುಭವಮಂಟಪದ ಮಾನ್ಯ ಸದಸ್ಯರಾದರು. ಕಾಯಕಜೀವಿಗಳಾದರು, ಸತ್ಯ ಶರಣರಾದರು. ಅನುಭವ ಮಂಟಪದ ವಿಶ್ವಮಾನ್ಯ ತತ್ವಗಳನ್ನು ಆಚರಿಸಿ ಹುತಾತ್ಮರಾದರು".[೯]

ಲೇಖಕರ ಅಭಿಪ್ರಾಯದಂತೆ ಜಾತಿಗಳನ್ನು ಮೀರಿ ಅನುಭವಮಂಟಪದ ಸದಸ್ಯರಾದರು. ಮಧುವರಸ, ಹರಳಯ್ಯ ಮೊದಲಾದವರು ಸದಸ್ಯರಾಗುವ ಮೂಲಕ ಜಾತ್ಯಾತೀತ ಸಮಾಜದ ನಿರ್ಮಾಣಕ್ಕೆ ಅಡಿಪಾಯ ಹಾಕಿದರು. ಆದರೆ ಇಂದು ಜಾತಿಗಳ ಹೆಸರಿನಲ್ಲಿಯೇ ಗುಂಪುಕಟ್ಟಿಕೊಂಡು ಹೊಡೆದಾಡುವುದನ್ನು ನೋಡಿದರೆ ಮಾನವೀಯತೆಯೇ ಮರೆಯುತ್ತಿರುವರೇನೋ ಎಂಬ ಮನೋಭಾವ ಮೂಡುತ್ತದೆ. ಅದು ವಿದ್ಯಾರ್ಥಿಗಳಲ್ಲಿಯೇ ಜಾತಿ ಗುಂಪುಗಾರಿಕೆ, ಘರ್ಷಣೆ ನಡೆಯುತ್ತಿರುವುದು ಶೋಚನೀಯ.

"ಅರಿಷಡ್ವರ್ಗ ವಿಜಯಿಯೇ ಲೋಕ ವಿಜಯಿಯಾಗುತ್ತಾನೆ. ಅವನೇ ಶರಣ" ಎಂದು ದೇಜಗೌ ಅಭಿಪ್ರಾಯಪಡುತ್ತಾರೆ. ಇದೇ ವಿಚಾರದ ನೆಲೆಯಲ್ಲಿ ದೇಜಗೌ ಅವರು ಬುದ್ಧ, ಯೇಸು, ಗಾಂಧಿ, ಅಂಬೇಡ್ಕರ್, ಲೆನಿನ್, ರಾಮಾನುಜ ಮುಂತಾದ ದಾರ್ಶನಿಕ ಪುರುಷರನ್ನು ನೆನೆಯುತ್ತಾರೆ. ವಚನಕಾರರಂತೆ ಇವರದು ಮಾದರಿ ಜೀವನವೇ. ಜಗತ್ತಿಗೆ ಬೆಳಕನ್ನು ನೀಡಲೆಂದೆ ಬಂದವರು. ಮಾನವೀಯ ಮೌಲ್ಯಗಳ ಸಾಕಾರಮೂರ್ತಿಗಳಾಗಿದ್ದವರು. ಸಾಮಾಜಿಕ ತಾರತಮ್ಯವನ್ನು ಹೋಗಲಾಡಿಸಲು ಹೋರಾಡಿದವರು.

ಸಮಾಜದ ಅಸಮಾನತೆಗೆ ಆರ್ಥಿಕ ಅಂಶಗಳು ಕಾರಣವಾಗಿವೆ ಎಂಬುದನ್ನು ದೇಜಗೌ ಗುರುತಿಸುತ್ತಾರೆ. ಪ್ರಪಂಚದ ಮೊದಲ ಹತ್ತು ಶ್ರೀಮಂತರು ಹಾಗೆಯೇ ಭಾರತದ ಶ್ರೀಮಂತ ಪಟ್ಟಿಯಲ್ಲಿರುವವರು ಎಂದೆಲ್ಲಾ ಪರಿಗಣಿಸುವಾಗ ಸಂಪತ್ತೆಲ್ಲಾ ಅವರಲ್ಲೇ ಶೇಖರಣೆಯಾಗಿದೆ ಎಂಬುದು ತಿಳಿದುಬರುತ್ತದೆ. ಇದಕ್ಕೆ ಕಾರಣ ಹಲವಾರು ಇರಬಹುದು. ಭಾರತ ಕೂಡ ಅತಿ ಹೆಚ್ಚು ಮಾನವ ಸಂಪನ್ಮೂಲ ಹೊಂದಿದ ರಾಷ್ಟ್ರವಾಗಿದೆ. ಆದರೆ ಅದರ ಸದ್ಬಳಕೆಯಾಗುತ್ತಿಲ್ಲ, ವ್ಯರ್ಥವಾಗಿ ಹೋಗುತ್ತಿದೆ. ಪ್ರತಿಯೊಬ್ಬರು ವಿದ್ಯೆಗೆ ತಕ್ಕ ಕೆಲಸಕ್ಕಾಗಿ ಹಾತೊರೆಯುತ್ತಾರೆ. ಅಧಿಕಾರಿಗಳೇ ಆಗಲು ಬಯಸುತ್ತಾರೆ. ಆದರೆ ಶರಣರು ಕಾಯಕಕ್ಕೆ ಹೆಚ್ಚು ಮಹತ್ವ

ಕೊಟ್ಟವರು. ದೇಜಗೌ ಅವರು ಬಸವಣ್ಣನವರ ವಚನದೊಂದಿಗೆ ಉದಾಹರಿಸಿದ್ದಾರೆ. "ಹಾವು ತಿಂದವರ ನುಡಿಸಬಹುದು, ಗರಹೊಡೆದವರ ನುಡಿಸಬಹುದು, ಸಿರಿಗರ ಹೊಡೆದವರ ನುಡಿಸಲುಬಾರದು ನೋಡಯ್ಯಾ" ಎಂಬ ಬಸವಣ್ಣನವರ ಬಣ್ಣನೆಯಲ್ಲಿ ಕಾಲಾದೇಶಾತೀತವಾದ ಯಥಾರ್ಥತೆ ಇದೆ"[೧೦] ಈ ಮಾತು ಯಾವುದರ ಮಿತಿಯಿಲ್ಲದೆ ಎಲ್ಲರಿಗೂ ಅನ್ವಯಿಸುವಂತಹುದೆ. ಹಣದ ವ್ಯಾಮೋಹ ಹುಟ್ಟಿನಿಂದಲೇ ಬಂದುಬಿಡಬಹುದೇನೋ ಎಂಬ ಭಾವನೆ ಮೂಡುತ್ತದೆ. ಶ್ರೀಮಂತಿಕೆಯು ಮನುಷ್ಯನ ಮಾನವೀಯ ಗುಣಗಳನ್ನು ನಾಶಮಾಡುತ್ತದೆ. ಇತ್ತೀಚೆಗೆ ನಾವು ಕಂಡು ಕೇಳುತ್ತಿರುವ ವಿಷಯಗಳು ಆಶ್ಚರ್ಯವುಂಟು ಮಾಡುತ್ತವೆ. ಕೆಲವು ಹಣದ ಶ್ರೀಮಂತರು ತಮ್ಮ ಕುಟುಂಬದ ಸದಸ್ಯರು ಸತ್ತಾಗಲೇ ಅಳುವುದಕ್ಕಾಗಿ ಬಾಡಿಗೆಯವರನ್ನು ಕರೆಸಿ ಅಳಿಸುವುದನ್ನು ಕಂಡಿದ್ದೇವೆ. ಮರ್ಯಾದೆಗೆ ಕುಂದು ಬರಬಹುದೇನೋ ಎಂಬ ಯೋಚನೆಯಿಂದ ಹೃದಯ ಶ್ರೀಮಂತಿಕೆಯನ್ನೇ ಮರೆಯುತ್ತಿದ್ದಾರೆ. ಈ ಮಟ್ಟಿನ ಪರಿಸ್ಥಿತಿ ಬರಬಹುದು ಎಂಬ ಆಲೋಚನೆ ವಚನಕಾರರಿಗೆ ಅಂದೇ ಬಂದುಬಿಟ್ಟಿತ್ತು. ಅವರ ಹೃದಯ ವೈಶಾಲ್ಯತೆಯನ್ನು ದೇಜಗೌ ಅವರು ಗುರುತಿಸಿದ್ದಾರೆ.

೧೨ನೆಯ ಶತಮಾನದಲ್ಲಿಯೇ ಬಸವಣ್ಣನವರು ಆರ್ಥಿಕ ಸುಧಾರಣೆಗಳನ್ನು ಜಾರಿಗೆ ತಂದಿದ್ದರು. ಇಂದು ದೇಶದ ಅಭಿವೃದ್ಧಿಗಾಗಿ ಎಷ್ಟೆಲ್ಲಾ ಪಂಚವಾರ್ಷಿಕ ಯೋಜನೆಗಳನ್ನು ಆರ್ಥಿಕ ತಜ್ಞರೇ ರೂಪಿಸಿದರೂ ಅದು ಸದುಪಯೋಗವಾಗುವುದು ಕಷ್ಟ. ದೇಜಗೌ ಅವರು "ದುಡಿಯದೆ ದೊಡ್ಡವರಾದವರೇ ಎಲ್ಲೆಲ್ಲೂ ಕಾಣುತ್ತಾರೆ. ಮಾರ್‍ವಾಡಿಗಳೇ ಈ ಮಾತಿಗೆ ಸಾಕ್ಷಿ"[೧೧] ಎಂಬ ಹೇಳಿಕೆಕೊಡುತ್ತಾರೆ. ಇದು ನಿತ್ಯ ಸತ್ಯವಾದುದು ಕೂಡ. ಕಷ್ಟಪಟ್ಟು ಹಗಲು ರಾತ್ರಿ, ಮಳೆ–ಗಾಳಿ ಎನ್ನದೆ ಸಾಲಮಾಡಿ ಬಡ್ಡಿಯೆಂಬ ವ್ಯೂಹದೊಳಗೆ ಸಿಲುಕಿ ಹೊರಬರಲಾರದೆ ಸಾವನ್ನಪ್ಪುವ ರೈತರ ಸಂಕಷ್ಟದ ಮುಂದೆ ಸಾಲಕೊಟ್ಟು ಬಡ್ಡಿ ವಸೂಲಿಮಾಡಿ ನೆಮ್ಮದಿ ಜೀವನ ನಡೆಸುತ್ತಿರುವ ಮಾರ್‍ವಾಡಿಗಳ ಬದುಕು ಉತ್ತಮ ನಿದರ್ಶನವಾಗಿದೆ. "ಬಡ್ಡಿಕಾರನಂತೆ ಒಂದು ಕೊಟ್ಟು ಎರಡು ಪಡೆವ ಜಡಜೀವಿಗಳ ಭಕ್ತರೆನಬಹುದೇನಯ್ಯಾ, ಅಖಂಡೇಶ್ವರಾ"[೧೨] ಅದೇ ಅರ್ಥವನ್ನು ಕೊಡುವ ಷಣ್ಮುಖಸ್ವಾಮಿಯ ವಚನವನ್ನು ನೆನೆಯುತ್ತಾರೆ. ಜಿಪುಣರ ಕುರಿತು ಬಸವಣ್ಣನವರು "ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದು ಕ್ರೀಯ ಮಾಡೆನು"[೧೩] ಎಂದು ಕೂಡಿಟ್ಟ ಹಣ ಸಮಾಜದ ಒಳಿತಿಗಾಗಿ ಸದ್ಬಳಕೆಯಾಗಬೇಕೆಂದು ಬಯಸುವ ಮನೋಭಿಲಾಷೆಯನ್ನು ದೇಜಗೌ ಗುರುತಿಸಿದ್ದಾರೆ.

ಹಾಗೆಯೇ ಇಂದಿಗೂ ಕಗ್ಗಂಟಾಗಿಯೇ ಉಳಿದಿರುವ ಕಪ್ಪುಹಣವನ್ನು ಹೊರಗೆ ತೆಗೆಸಿ ಸದ್ಬಳಕೆ ಮಾಡದ ಸರ್ಕಾರದ ವಿರುದ್ಧ ಸಿಡಿಮಿಡಿಗೊಳ್ಳುತ್ತಾರೆ. ಪ್ರಜಾಪ್ರಭುತ್ವ ನೀತಿಗಳನ್ನೊಳಗೊಂಡ ಸರ್ಕಾರ ಸಮಾಜವಾದವನ್ನು ಮರೆಯುತ್ತಿದೆ ಎಂದು ಅಭಿಪ್ರಾಯಪಡುತ್ತಾರೆ. ಬಡವ-ಶ್ರೀಮಂತರೆಂಬ ಅಸಮಾನತೆ ತೊಲಗಬೇಕೆಂದು ಸಾರುತ್ತಾರೆ. ಒಬ್ಬ ಹಸಿವಿನಿಂದ ನರಳುವಾಗ ಇನ್ನೊಬ್ಬ ತಿನ್ನಲಾರದೆ ಹೆಚ್ಚಾಗಿ ವ್ಯರ್ಥಮಾಡುವುದು ಸಾಮಾಜಿಕ ನ್ಯಾಯವಲ್ಲ ಎಂದು ಹೇಳುವುದರ ಜೊತೆಗೆ

"ಹೊನ್ನಿನೊಳಗೊಂದೊರೆಯ ಸೀರೆಯೊಳಗೊಂದೆಳೆಯ
ಅನ್ನದೊಳಗೊಂದಗುಳ
ಇಂದಿಂಗೆ ನಾಳಿಂಗೆ, ಬೇಕೆಂದೆನಾದರೆ
ನಿಮ್ಮಾಣೆ, ನಿಮ್ಮ ಪುರಾತರಾಣೆ"[೧೪]

ಎಂಬ ಬಸವಣ್ಣನವರ ಈ ವಚನದಲ್ಲಿ ಸಮಾಜವಾದದ ತಿರುಳಿದೆ ಎಂಬುದನ್ನು ತಿಳಿಸಿಕೊಡುತ್ತಾರೆ.

ದೇಜಗೌ ಅವರು ಸಮಾಜವಾದದ ದೃಷ್ಟಿಯಲ್ಲಿ ಪ್ರಮುಖವಾಗಿ ಕಾಯಕ-ದಾಸೋಹ ತತ್ವಗಳನ್ನು ಗುರುತಿಸಿದ್ದಾರೆ. ಅವು ವಚನಗಳಲ್ಲಿ ಹೇಗೆ ವ್ಯಕ್ತವಾಗಿದೆ ಎಂಬುದನ್ನು ಉದಾಹರಣೆಗಳ ಸಹಿತ ವಿವರಿಸುತ್ತಾರೆ. "ಕಾಯಕ ದಾಸೋಹಗಳು ಒಂದೇ ಹಂಬಿನ ಎರಡು ಕುಡಿಗಳು. ಒಂದಿಲ್ಲದೆ ಮತ್ತೊಂದಿಲ್ಲ, ದಾಸೋಹವೆಂದರೆ ಕೈಂಕರ್ಯ, ಶರಣಭಾವ, ಭಕ್ತಿ, ದಾನ, ತ್ಯಾಗ

ಸೋಹಂ ಎಂದಡೆ ಅಂತರಂಗದ ಗರ್ವ
ಶಿವೋಹಂ ಎಂದಡೆ ಬಹಿರಂಗದ ಅಹಂಕಾರ
ಈ ಉಭಯವನ್ನದು ದಾಸೋಹಂಭಾವವನೆ
ಕರುಣಿಸಿ ಬದುಕಿಸಯ್ಯ ಅಖಂಡೇಶ್ವರಾ

ಎಂಬ ಷಣ್ಮುಖಸ್ವಾಮಿಯ ವಚನ ಅಹಂಕಾರ ತ್ಯಾಗವೇ ದಾಸೋಹವೆಂದು ಹೇಳುತ್ತದೆ.[೧೫]

ಕಾಯಕ ಮಹತ್ವವನ್ನು ಸಾರಿದ ವಚನಕಾರರ ಪ್ರಕಾರ ದುಡಿದದನ್ನೆಲ್ಲಾ ಸಮಾನವಾಗಿ ಹಂಚಿಕೊಳ್ಳಬೇಕು. ದಾಸೋಹದಿಂದ ಮನುಷ್ಯ ಪರಿಶುದ್ಧನಾಗುತ್ತಾನೆ. ನೆಮ್ಮದಿಯ ಭಾವ ಅವನಲ್ಲಿ ಮೂಡುತ್ತದೆ ಎಂದು ಅಭಿಪ್ರಾಯಪಡುತ್ತಾರೆ.

"ದಾಸೋಹವು ಧಾರ್ಮಿಕ ಆಚರಣೆಯಲ್ಲ. ಇದೊಂದು ಸಾಮಾಜಿಕ ಹಾಗೂ ಆರ್ಥಿಕ ನೀತಿ, ದಾಸೋಹಿಯು ಅಹಂಕಾರ ವಿರಹಿತ, ಸಮಗ್ರಹ ಪ್ರವೃತ್ತಿದೂರ, ಅಂಥ ಪರಮ ದಾಸೋಹಿಯಲ್ಲಿ ದೇವರು ನೆಲೆಸಿರುತ್ತಾನೆನ್ನುವ ಮಾದಾರ ಧೂಳಯ್ಯನ ವಚನ

ಸತ್ಯ ಶುದ್ಧ ಕಾಯಕವ ಮಾಡಿ
ವಂಚನೆಯಿಲ್ಲದೆ ಪ್ರಪಂಚಳಿದು
ನಿಚ್ಚ ಜಂಗಮಕ್ಕೆ ದಾಸೋಹ ಮಾಡುವ
ಸದ್ಭಕ್ತನ ಹೃದಯದೊಳಗೆ
ಅಚ್ಯೊತ್ತಿದಂತಿಪ್ಪ ಕಾಮಧೂಮ ಧೂಳೇಶ್ವರಾ[೯೬]

ಲೇಖಕರ ಈ ಅಭಿಪ್ರಾಯವು ದಾಸೋಹದ ಪ್ರಾಮುಖ್ಯವನ್ನು ಸಾರುವಂತಹದೇ ಆಗಿದೆ. ಕಾಯಕ-ದಾಸೋಹದ ಅರಿವು ಪ್ರತಿಯೊಬ್ಬ ವಚನಕಾರನಿಗೂ ಇತ್ತು ಎಂಬ ಅಂಶ ತಿಳಿದುಬರುತ್ತದೆ. ಕೂಡಿಡುವುದು ದಾಸೋಹಿಗಳ ಧರ್ಮವಾಗಿರಲಿಲ್ಲ.

ಕೃಷಿಕಾಯಕದಿಂದಾದಡೇನು?
ತನುಮನ ಬಳಲಿಸಿ ತಂದು ದಾಸೋಹವ ಮಾಡುವ
ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ

ಎಂಬ ಚೆನ್ನಬಸವಣ್ಣನ ವಚನದ ಪ್ರಕಾರ ದುಡಿಮೆಯಿಂದ ಪಡೆದದ್ದನ್ನು ದಾಸೋಹ ಮಾಡುವವನೇ ಸದ್ಭಕ್ತ[೯೭] ಎಂಬ ವಚನವು ದಾಸೋಹ ಕುರಿತಾದುದು. ಪ್ರತಿಯೊಬ್ಬ ಕಾಯಕ ತಪಸ್ವಿಯೂ ದಾಸೋಹದಲ್ಲಿ ನಿರತನಾಗಿರುತ್ತಿದ್ದ ಕಷ್ಟಪಟ್ಟು ಬೆವರು ಸುರಿಸಿ ಕೂಡಿಟ್ಟ ಹಣವನ್ನು ದೇವರಿಗೆ ಹಾಕುವವರು ಕಡಿಮೆ. ಅನ್ಯಾಯ, ಅಧರ್ಮದಿಂದ ಬಂದ ಹಣವನ್ನು ದೇವರ ಹುಂಡಿಗೆ ಹಾಕಿ ಮೆಚ್ಚಿಸಿಕೊಳ್ಳುವವರೇ ಹೆಚ್ಚು. ತಿರುಪತಿ ತಿಮ್ಮಪ್ಪನ ಉದಾಹರಣೆಯನ್ನು ಕೊಟ್ಟು ದೇಜಗೌ ಅವರು ಇಂದು ವ್ಯಾಪಕವಾಗಿ ಹರಡುತ್ತಿರುವ ಲಂಚ, ಭ್ರಷ್ಟಾಚಾರದ ಬಲೆಯೊಳಗೆ ಅಧಿಕಾರಿಗಳು ಸಿಲುಕಿ ನಲುಗುರಿತ್ತಿರುವುದನ್ನು ನೆನಪಿಸುತ್ತಾರೆ. ಯಾವುದರಲ್ಲಿ ಭ್ರಷ್ಟಾಚಾರ ನಡೆದಿಲ್ಲ ಎಂಬುದನ್ನು ಯೋಚಿಸಬೇಕಾಗಿದೆ. ಸಾಲ ತೀರಿಸಲಾಗದೆ ತನ್ನ ನೌಕರರಿಗೆ ಸಂಬಳ ಕೊಡಲಾಗದಿದ್ದರೂ ದೇವಸ್ಥಾನಕ್ಕೆ ಚಿನ್ನದ ಬಾಗಿಲನ್ನು ಮಾಡಿಸಿಕೊಡುವ ಶ್ರೀಮಂತರ ಬಗ್ಗೆ ಮಾಧ್ಯಮಗಳಲ್ಲಿ ಪ್ರಸಾರವಾದಾಗ ಬೇಸರ ಮಾಡುತ್ತದೆ. ವಚನಕಾರರು ಎಷ್ಟೆಲ್ಲಾ ಮುಂದಾಲೋಚನೆ ಮಾಡಿದ್ದರು ಎಂಬ ವಿಚಾರವನ್ನು ಅವರ ವಚನಗಳ ಮೂಲಕ

ದೇಜಗೌ ಅವರು ವಿವರಿಸುತ್ತಾರೆ. ವಚನಕಾರರ ಯೋಚನೆ, ಯೋಜನೆಗಳ ಬಗ್ಗೆ ಅಚ್ಚರಿಯೂ ಆಗುತ್ತದೆ.

> ಕಾಯಕವೆಂದು ಕಾಯವ ಬಳಲಿಸದೆ
> ತನು ಕರಗದೆ ಮನ ನೋಯದೆ
> ಬೇಡಿ ಕಾಡಿ ಮಾಡುವುದು ದಾಸೋಹವೇ?

ಎಂದು ಶಿವಲೆಂಕ ಮಂಚಣ್ಣ ಪ್ರಶ್ನಿಸುತ್ತಾನೆ.[೧೮]

ದುರಾಶೆಗೆ ಬಿದ್ದ ಮನುಷ್ಯ ನೈತಿಕತೆಯನ್ನು ಮರೆತು ಸುಲಭವಾಗಿ ಹಣ ಸಂಪಾದನೆ ಮಾಡುವ ದಾರಿಯನ್ನು ಹುಡುಕುತ್ತಿರುತ್ತಾನೆ. ಮೇಲಿನ ವಚನದ ಮೂಲಕ ದೇಜಗೌ ಅವರು ಅರ್ಥಮಾಡಿಸಿದ್ದಾರೆ. ಅಂದು ವಚನಕಾರರಲ್ಲಿದ್ದ ಒಗ್ಗಟ್ಟು, ಸಹಕಾರ, ಶ್ರದ್ಧೆ ಇಂದು ಇಲ್ಲವಾಗಿದೆ. ಅಭಿವೃದ್ಧಿಯಲ್ಲಿ ಕುಂಠಿತವಾಗಲು ಮುಷ್ಕರ ಒಳಜಗಳಗಳು ಕಾರಣವಾಗಿವೆ.

ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ, ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತರಿಗೆ ಎತ್ತ ನೋಡಿದರತ್ತ ಲಕ್ಷ್ಮಿ ತಾನಾಗಿಪ್ಪಳು– ಲಕ್ಕಮ್ಮ

ಸತ್ಯ ಶುದ್ಧ ಕಾಯಕದಿಂದ ಬಂದ ದ್ರವ್ಯದಲ್ಲಿ ಚಿತ್ತ ವಿಚ್ಛಂದವಾಗದಿರಬೇಕು. ನೇಮದ ಕೂಲಿಯೆಂದಿನ ನಿತ್ಯ ನೇಮದಲ್ಲಿ ಸಂದಿರಬೇಕು – ಆಯ್ದಕ್ಕಿ ಮಾರಯ್ಯ.[೧೯]

ವರ್ಣನೆಗಳು ಬೇರೆಯಾದರೂ ಉದ್ದೇಶಗಳು ಒಂದೇ ಆಗಿದ್ದ ವಚನಗಳು ಬೇರೆಯವರ ಹಣದಿಂದ ದಾನ ಮಾಡುವ ಬುದ್ಧಿಯನ್ನು ಬಿಡಬೇಕು, ತಮ್ಮ ಕೆಲಸವನ್ನು ಶ್ರದ್ಧೆ, ಭಕ್ತಿಯಿಂದ ಮಾಡಿದರೆ ಲಾಭ ಹುಡುಕಿಕೊಂಡು ಬರುತ್ತದೆ, ಕಾಯಕ ಧರ್ಮ ಪ್ರತಿಯೊಬ್ಬರಿಗೂ ಮುಖ್ಯ, ಸಮಾಜದ ಒಳಿತಿಗೂ ದಾರಿ ಮಾಡಿಕೊಡುತ್ತದೆ, ಸಮಾಜವಾದದ ತತ್ವ ಕಾರ್ಯರೂಪಕ್ಕೆ ಬರುತ್ತದೆ ಎಂಬ ವಿಚಾರವನ್ನು ಅನೇಕ ವಚನಗಳಲ್ಲಿ ದೇಜಗೌ ಗುರುತಿಸಿ ಸುಲಭವಾಗಿ ಅರ್ಥಮಾಡಿಸಿದ್ದಾರೆ.

ಮನುಷ್ಯ ಮಾಯೆಯನ್ನು ಬಿಡಬೇಕು ಎಂಬುದು ವಚನಕಾರರ ನಿಲುವು. ಇಲ್ಲೇ ಇರುವ ಸ್ವರ್ಗವನ್ನು ಮರೆತು ಇರದ ಆಸೆಗೆ ಕಾಯುವುದು ವ್ಯರ್ಥ. ಹುಟ್ಟು– ಸಾವು ಸತ್ಯ ಎಂಬ ಅರಿವು ಇರಬೇಕು.

> ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ
> ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ
> ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ

ಎಂಬ ಬೋಧೆ ಎಂತವನನ್ನಾದರೂ ಕಾರ್ಯತತ್ಪರನ್ನಾಗಿಸುತ್ತದೆ.[೨೦] ದೇಜಗೌ ಅವರು ಈ ವಚನದ ಮೂಲಕ ತುಂಬಾ ಸರಳವಾಗಿ, ಅರ್ಥವತ್ತಾಗಿ ಲೌಕಿಕ ಬದುಕನ್ನು ಅರ್ಥಮಾಡಿಸುತ್ತಾರೆ. ಮೂಢನಂಬಿಕೆಗಳು ಮನುಷ್ಯನ ನೈಜತೆಯನ್ನೇ ಹಾಳು ಮಾಡುತ್ತಿವೆ. ಜೀವನ ಪ್ರೀತಿಯನ್ನೇ ಕಳೆದುಕೊಳ್ಳುತ್ತಿದ್ದಾರೆ ಎಂದು ಅಭಿಪ್ರಾಯಪಡುತ್ತಾರೆ. ಆದರೆ ಈಗಲಾದರೂ ಮೂಢನಂಬಿಕೆಗಳನ್ನು ಸಂಪೂರ್ಣವಾಗಿ ಬಿಡಲಾಗಿದೆಯೇ? ವಿಜ್ಞಾನಿಗಳಿಂದಲೇ ಸಾಧ್ಯವಾಗಿಲ್ಲ, ಇದೊಂದು ವಿಪರ್ಯಾಸವೇ ಆಗಿದೆ. ವಚನಕಾರರು ಅಲೌಕಿಕ ಸುಖವನ್ನು ಬಯಸಿದವರಲ್ಲ. ಪ್ರಾಕೃತಿಕವಾಗಿ ಸಿಗುವ ಎಲ್ಲಾ ಸಂತೋಷಗಳನ್ನು ಪಡೆದವರು, ಅನುಭವಿಸಿದವರು.

ಬಸವಣ್ಣ ಜಗತ್ತಿನ ಪ್ರಪ್ರಥಮ ಸಮಾಜವಾದಿಯೆಂದೇ ಹೇಳಬಹುದು. ವರ್ಗವರ್ಣ ಜಾತಿರಹಿತ ಸಮಾಜ ಸೃಷ್ಟಿಯೇ ಅವರ ಸಕಲ ಸಾಹಸ ಸಾಧನೆಗಳ ಪ್ರಧಾನೋದ್ದೇಶವಾಗಿತ್ತು.[೨೧]

ಬಸವಣ್ಣನವರ ಕುರಿತ ದೇಜಗೌ ಅವರ ಈ ಅಭಿಪ್ರಾಯ ಬಸವಣ್ಣನವರ ಶ್ರೇಷ್ಠ ವ್ಯಕ್ತಿತ್ವವನ್ನು ಪರಿಚಯಿಸುತ್ತದೆ. ಕ್ರಾಂತಿಕಾರಿ, ಭಕ್ತಿ ಭಂಡಾರಿ, ಕಾಯಕ ಯೋಗಿ, ಸಮಾಜವಾದಿ, ಮಾನವತಾವಾದಿ ಹೀಗೆ ಹಲವಾರು ಜನಪರ ಬಿರುದಿಗೆ ಪಾತ್ರರಾಗಿರುವ ಶ್ರೇಷ್ಠ ವಚನಕಾರ ಬಸವಣ್ಣ ನಿಸ್ವಾರ್ಥ ಹೋರಾಟಗಾರ. ಆರೋಗ್ಯಕರ ಸಮಾಜ ನಿರ್ಮಾಣ ಅವರ ಗುರಿಯಾಗಿತ್ತು.

ಕೈಗಾರಿಕಾ ಕ್ರಾಂತಿ ಮೊದಲಾದ ಹಲವಾರು ಕ್ರಾಂತಿಗಳು, ಚಳುವಳಿಗಳು ದೇಶವಿದೇಶಗಳಲ್ಲಿ ನಡೆಯುವ ಮೊದಲು ವಚನ ಸಾಹಿತ್ಯ ಯಶಸ್ವಿಯಾಗಿ ಹರಡಿದ್ದರೆ ಈ ಕ್ರಾಂತಿಗಳ ಅವಶ್ಯಕತೆಯೇ ಇರುತ್ತಿರಲಿಲ್ಲ. ಸರಳ ಜೀವನವೇ ಪ್ರಗತಿಗೆ ಮುಖ್ಯ ದಾರಿ ಎಂಬ ಶರಣರ ಅಭಿಪ್ರಾಯವನ್ನು ಅರಿತಿದ್ದರೆ ಬಂಡವಾಳಗಾರರು, ದಲ್ಲಾಳಿಗಳು, ಶ್ರೀಮಂತರು, ಬಡವರು ಎಂಬ ಗುಂಪೇ ಇರುತ್ತಿರಲಿಲ್ಲ. ಸ್ತ್ರೀ ಸ್ವಾತಂತ್ರ್ಯವನ್ನು ಸರಿಯಾಗಿ ಗ್ರಹಿಸಿದ್ದರೆ ಇಂದು ಮಹಿಳಾಪರ ಚಳುವಳಿಗಳು ಇರುತ್ತಿರಲಿಲ್ಲ.

ಪಾಶ್ಚಾತ್ಯರ ಸಮಾಜವಾದದ ಚಳುವಳಿ ಭಾರತೀಯ ಸಮಾಜವಾದ ಹೋರಾಟಕ್ಕೆ ಮೂಲವಾಗಿದೆ ಎಂಬ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸಿಕೊಂಡು ಇಡೀ ಸಮಾಜವಾದದ ತಿರುಳು ಭಾರತದ ಅದರಲ್ಲೂ ಕರ್ನಾಟಕದಲ್ಲಿ ವಚನ ಸಾಹಿತ್ಯ ಯುಗದಲ್ಲಿ ಆರಂಭವಾಯಿತು ಎಂಬ ಸತ್ಯವನ್ನು ಅರಿಯಬೇಕು ಎಂಬುದು ದೇಜಗೌ ಅವರ ಕಳಕಳಿಯಾಗಿದೆ. ಈ ರೀತಿಯ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

"ಹೆಣ್ಣು ಮಾಯೆಯಲ್ಲ, ದಾಸಿಯೂ ಅಲ್ಲ, ಪುರುಷನ ಅರ್ಧಾಂಗಿನಿ ಎಂಬುದು ಬಸವಣ್ಣನವರ ಭಾವನೆ. ಲಿಂಗವಿದ್ದಲ್ಲಿ ಸೂತಕವೂ ಇಲ್ಲ ಎಂದವರೂ ಅವರೇ. ಬುದ್ಧಿಯಲ್ಲಿ, ಪ್ರತಿಭೆಯಲ್ಲಿ, ಜ್ಞಾನಸಂಪಾದನೆಯಲ್ಲಿ, ಆಧ್ಯಾತ್ಮಿಕ ಸಾಧನೆಯಲ್ಲಿ ಹೆಂಗಸು ಯಾವ ರೀತಿಯಲ್ಲಿಯೂ ಗಂಡಸಿಗಿಂತ ಕೀಳಲ್ಲವೆಂದು ಅವರು ವಾದಿಸುತ್ತಾರೆ. ಗಂಡಸಿನಂತೆ ಅವಳೂ ಎಲ್ಲ ಸ್ವಾತಂತ್ರಗಳಿಗೆ ಅರ್ಹಳು ಎಂಬುದನ್ನು ಮನದಟ್ಟು ಮಾಡಿಕೊಡುತ್ತಾರೆ. ಅನುಭವ ಮಂಟಪದಲ್ಲಿ ಅನೇಕ ಶರಣೆಯರು ಶರಣರೊಡನೆ ಸರಿ ಸಮನಾಗಿ ಕುಳಿತು ಚರ್ಚೆ ನಡೆಸಿದ ಸಂಗತಿ ಅವರ ಸ್ವಾತಂತ್ರ್ಯಕ್ಕೆ ಸಾಕ್ಷಿಯಾಗಿದೆ.[೨೨]

ಲೇಖಕರ ಈ ಅಭಿಪ್ರಾಯ ಇಡೀ ಮಹಿಳಾ ಸ್ವಾತಂತ್ರ್ಯವನ್ನು ಸಾರುತ್ತದೆ. ೧೨ನೆಯ ಶತಮಾನದ ಮಹಿಳೆಗಿದ್ದ ಧೈರ್ಯ, ಸ್ಥೈರ್ಯ, ಆತ್ಮವಿಶ್ವಾಸ ೨೧ನೆಯ ಶತಮಾನದ ಮಹಿಳೆಗೆ ಎಲ್ಲಿ ಹೋಯಿತು ಎಂಬ ಯೋಚನೆ ಮೂಡುತ್ತದೆ. ಇಂದು ನಡೆಯುತ್ತಿರುವ ಅತ್ಯಾಚಾರ, ಶೋಷಣೆಗಳು ಇದಕ್ಕೆ ಸಾಕ್ಷಿಯಾಗಿವೆ. ಆಧುನಿಕ ಭಾರತದ ಹೋರಾಟಗಾರರಾದ ಗಾಂಧಿ, ಲೋಹಿಯಾ, ಜಯಪ್ರಕಾಶ್ ಮುಂತಾದ ಸಮಾಜ ಸುಧಾರಕರ ತತ್ವಗಳು ಗಾಳಿಯಲ್ಲಿ ತೂರಿಹೋಗುತ್ತಿವೆ. ಇಂತಹ ಪರಿಸ್ಥಿತಿ ಇರುವಾಗ ೧೨ನೆಯ ಶತಮಾನದ ಶರಣರ ವಚನಗಳಿಗೆ ಸರಿಯಾದ ಪುರಸ್ಕಾರ ಸಿಗಲಿದೆಯೇ ಎಂಬ ಆತಂಕವನ್ನು ದೇಜಗೌ ಅವರು ವ್ಯಕ್ತಪಡಿಸುತ್ತಾರೆ.

ಶರಣರ ಎಲ್ಲಾ ಸಮಾಜಮುಖಿ ಧೋರಣೆಗಳನ್ನು ಸಮರ್ಥವಾಗಿ ಅರ್ಥಮಾಡಿಕೊಂಡು ಮೂಲಭೂತ ತತ್ವಗಳನ್ನು ಬಿಡದೆ, ಆಧುನಿಕ ಪರಿಸ್ಥಿತಿ-ಗೊಗ್ಗುವಂತೆ ಅದನ್ನು ಅಲ್ಪಸ್ವಲ್ಪ ಮಾರ್ಪಡಿಸಿಕೊಂಡು ಕಾರ್ಯಗತಗೊಳಿಸಿದ್ದಾದರೆ ಭರತಖಂಡ ಇಂದು ಎದುರಿಸುತ್ತಿರುವ ಪೈಶಾಚಿಕ ಸಮಸ್ಯೆಗಳು ಸುಲಭವಾಗಿ ಬಗೆಹರಿಯಬಹುದೆಂದು ಆಶಿಸಬಹುದಾಗಿದೆ.[೨೩]

ಸ್ವತಃ ವಚನಕಾರರಾಗಿರುವ ದೇಜಗೌ ಅವರು ವಚನ ಸಾಹಿತ್ಯದಲ್ಲಿರುವ ಎಲ್ಲಾ ಸಮಾಜಮುಖಿ ಅಂಶಗಳನ್ನು ಗುರುತಿಸಿ, ಸಂಶೋಧಿಸಿ, ವಿಶ್ಲೇಷಿಸಿ, ವಿಮರ್ಶಿಸಿ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ.

## ಕೊನೆಟಿಪ್ಪಣಿಗಳು

೧. ದೇಜಗೌ, ವಚನಗಳಲ್ಲಿ ಸಮಾಜವಾದ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೪, ಪು. ೧೧.

೨. ಅದೇ, ಪು. ೨.

೩. ಅದೇ, ಪು. ೬

೪. ದೇಜಗೌ, ಬಸವದರ್ಶನ, ಪ್ರಥಮ ಮುದ್ರಣ (೨೦೦೪), ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಪು. ೬೧೭.

೫. ದೇಜಗೌ, ವಚನಗಳಲ್ಲಿ ಸಮಾಜವಾದ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೪, ಪು. ೧೨-೧೩.

೬. ಅದೇ, ಪು. ೧೫.

೭. ಅದೇ, ಪು. ೧೬.

೮. ಅದೇ, ಪು. ೧೭.

೯. ಡಾ. ಎಸ್.ಆರ್.ಗುಂಜಾಳ, ಅನುಭವ ಮಂಟಪ, ಪ್ರಥಮ ಮುದ್ರಣ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೮, ಪು. ೧೫.

೧೦. ದೇಜಗೌ, ವಚನಗಳಲ್ಲಿ ಸಮಾಜವಾದ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೪, ಪು. ೨೨.

೧೧. ಅದೇ., ಪು. ೨೫.

೧೨. ಅದೇ., ಪು. ೨೬.

೧೩. ಅದೇ., ಪು. ೨೬.

೧೪. ಅದೇ., ಪು. ೨೫.

೧೫. ಅದೇ., ಪು. ೩೧.

೧೬. ಪ್ರೊ. ಟಿ.ಆರ್.ಮಹಾದೇವಯ್ಯ, ವಚನಗಳಲ್ಲಿ ಜೀವನಮೌಲ್ಯಗಳು, ಪ್ರಥಮ ಮುದ್ರಣ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೧೧, ಪು. ೭೫.

೧೭. ದೇಜಗೌ, ವಚನಗಳಲ್ಲಿ ಸಮಾಜವಾದ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೪, ಪು. ೩೩.

೧೮. ಅದೇ., ಪು. ೩೩.

೧೯. ಅದೇ., ಪು. ೩೭.

೨೦. ಅದೇ., ಪು. ೪೦.

೨೧. ದೇಜಗೌ, ಬಸವದರ್ಶನ, ಪ್ರಥಮ ಮುದ್ರಣ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೪. ಪು. ೩೧.

೨೨. ದೇಜಗೌ, ವಚನಗಳಲ್ಲಿ ಸಮಾಜವಾದ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೪, ಪು. ೪೨.

*****

# ಅಧ್ಯಾಯ - ೫

# ದೇಜಗೌ ಅವರು ಕಂಡಂತೆ ಬುದ್ಧ, ಬಸವ, ಅಂಬೇಡ್ಕರ್

ಪ್ರಪಂಚ ಕಂಡ ಮಹಾನ್ ಮಾನವತಾವಾದಿಗಳು ಬುದ್ಧ, ಬಸವಣ್ಣ, ಅಂಬೇಡ್ಕರ್. ಆಸೆಯೇ ದುಃಖಕ್ಕೆ ಮೂಲವೆಂದು ಯಾವುದೇ ಶ್ರೇಷ್ಟ ಸ್ಥಾನದಲ್ಲಿದ್ದರೂ ಸಾವು-ನೋವು, ರೋಗ-ರುಜಿನಗಳಿಂದ ಪಾರಾಗಲಾರವೆಂಬ ಸತ್ಯವನ್ನು ಜಗತ್ತಿಗೆ ಸಾರಿದ ಜ್ಞಾನಿ ಗೌತಮ ಬುದ್ಧ, ಜಾತಿಯಿಂದ ಬರುವ ಸಂಪ್ರದಾಯಗಳು, ಆಚರಣೆಗಳು, ಉಪದೇಶಗಳಿಂದ ಸಮಾಜ ಸಮಾನತೆಯನ್ನು ಸಾಧಿಸಲು ಸಾಧ್ಯವಿಲ್ಲ. ಅಸ್ಪೃಶ್ಯತೆಯಂತಹ ಹೀನ ಪದ್ಧತಿ ದೂರವಾಗಲಾರದು ಎಂದು ಸಾರುವುದರ ಮೂಲಕ ತಾವು ಕಟ್ಟಿಕೊಂಡಿದ್ದ ಜನಿವಾರವನ್ನೇ ಕಿತ್ತೊಗೆದು ಕೇವಲ ಒಂದೇ ಜಾತಿಗೆ ಮೀಸಲಾಗದೆ ಇಡೀ ಸಮಾಜಕ್ಕೆ ಬೆಳಕಾದವರು ಬಸವಣ್ಣ. ಚಾತುರ್ವರ್ಣ ವ್ಯವಸ್ಥೆಯ ವಿರುದ್ಧ ಸಿಡಿದೆದ್ದು ಶೋಷಿತರ, ದಲಿತರ ಹಕ್ಕುಗಳಿಗಾಗಿ ಹೋರಾಡಿದವರು ಡಾ. ಬಿ.ಆರ್.ಅಂಬೇಡ್ಕರ್. ಈ ಮೂವರು ಮಹಾನ್ ವ್ಯಕ್ತಿಗಳಿಗೂ ಶತಶತಮಾನಗಳ ಅಂತರ. ಧರ್ಮ, ಜಾತಿ, ಭಾಷೆ, ಸಾಮಾಜಿಕ ಪರಿಸರ ಎಲ್ಲದರಲ್ಲಿಯೂ ಅಂತರವಿದ್ದ ಇವರ ವ್ಯಕ್ತಿತ್ವ ವಿಶಿಷ್ಟವಾದುದು. ಮೂವರದು ಧಾರ್ಮಿಕ, ರಾಜಕೀಯ, ಆರ್ಥಿಕ, ಸಾಮಾಜಿಕ ಸುಧಾರಣೆಗಾಗಿ ಹೋರಾಟ. ಆದರೆ ಅವರಿಗಾದ ಅನುಭವಗಳು ಬೇರೆಬೇರೆಯಾಗಿದ್ದವು. ಬುದ್ಧನಾಗಲಿ, ಬಸವಣ್ಣನವರಾಗಲಿ ಜಾತಿಯ ವಿಷಯದಲ್ಲಿ ಯಾವುದೇ ಕೀಳರಿಮೆಗೆ ಒಳಗಾದವರಲ್ಲ. ಆದರೆ ಅಂಬೇಡ್ಕರರು ಸ್ವತಃ ಶೋಷಣೆಗೆ ಒಳಗಾದವರು. ಇವರು ತಮ್ಮ ಧರ್ಮದೊಳಗೆ ಸಮಾನತೆ ಪಡೆಯಲು ಹವಣಿಸಿದರೆ ಬುದ್ಧ, ಬಸವರು ತಮ್ಮ ಮೂಲ ಜಾತಿಯನ್ನು ಬಿಟ್ಟು ಹೊರಬಂದು ಶೋಷಿತರ ಪರ ಹೋರಾಟಕ್ಕಿಳಿಯುತ್ತಾರೆ. ಮೂವರ ಹೋರಾಟದ ಹಾದಿಯೂ ಕಷ್ಟಕರವಾದದ್ದೇ ಆಗಿತ್ತು. ಇದೆಲ್ಲವನ್ನು ಆತ್ಮವಿಶ್ವಾಸದಿಂದ, ನೈತಿಕಬಲದಿಂದ ಎದುರಿಸಿ ವಿಶ್ವಮಟ್ಟದಲ್ಲಿ ಗುರುತಿಸಿಕೊಂಡಿರುವರು.

ಬುದ್ಧ, ಬಸವ, ಅಂಬೇಡ್ಕರರ ವಿಚಾರಧಾರೆಗಳನ್ನು ದೇಜಗೌ ಅವರು ವಿಶೇಷವಾಗಿ ಚಿತ್ರಿಸಿದ್ದಾರೆ. ಅವರ ವ್ಯಕ್ತಿತ್ವಗಳು ಒಂದಕ್ಕೊಂದು ಹೇಗೆ ಹತ್ತಿರದಲ್ಲಿವೆ, ಒಬ್ಬೊಬ್ಬರ ಚಿಂತನೆಗಳು ಎಷ್ಟು ಎತ್ತರದಲ್ಲಿವೆ, ಸಮಾಜಮುಖಿಯಾಗಿವೆ ಎಂಬೆಲ್ಲಾ ವಿಷಯಗಳನ್ನು ಸ್ಪಷ್ಟವಾಗಿ ತಿಳಿಸಿಕೊಟ್ಟಿದ್ದಾರೆ. ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಅವರ ಚಿಂತನೆಗಳು ಎಷ್ಟರ ಮಟ್ಟಿಗೆ ಸಕಾರಾತ್ಮಕ

ಪ್ರಭಾವವನ್ನು ಬೀರಿವೆ ಎಂಬ ವಿಚಾರಗಳ ಬಗ್ಗೆ ವಿಶೇಷ ಬೆಳಕು ಬೀರಿದ್ದಾರೆ. ಈ ಮೂವರ ಬಗ್ಗೆ ತಿಳಿಯದ ಹಲವಾರು ವಿಚಾರಗಳನ್ನು ದೇಜಗೌ ಅವರು ಹೆಕ್ಕಿ ತೆಗೆದಿದ್ದಾರೆ. "ಮತಾಚಾರ್ಯರು, ದಾರ್ಶನಿಕರು, ಸಾಧುಸಂತರು, ಭಕ್ತಾಗ್ರಣಿಗಳು ಬಂದು ಹೋಗುತ್ತಾರೆ. ಲೆಕ್ಕವಿಲ್ಲದಷ್ಟು ದರ್ಶನಗಳು, ಭಕ್ತಿಕಾವ್ಯಗಳು, ಮಠಗಳು, ದೇವಾಲಯಗಳು ಹುಟ್ಟುಕೊಳ್ಳುತ್ತವೆ. ಆದರೆ ಯಾರೂ ದೀನದಲಿತರ ಕಣ್ಣೀರೊರೆಸುವುದಿಲ್ಲ. ಅವರಿಗಾಗಿ ಮರುಗುವುದಿಲ್ಲ. ಅವರನ್ನು ಮೇಲೆತ್ತುವುದಿಲ್ಲ. ಅವರಿಗಾಗಿ ಯಾವ ಗ್ರಂಥಗಳೂ ಹುಟ್ಟುವುದಿಲ್ಲ. ಅವರ ಕಷ್ಟಕ್ಕೆ ಪರಿಹಾರ ಸೂಚಿಸುವುದಿಲ್ಲ. ದೇವಾಲಯ ಸಹ ಅವರ ಬೆಂದೆದೆಗೆ ತಂಪೆರೆಯುವುದಿಲ್ಲ. ಪುರೋಹಿತರ ಸಂಕುಚಿತ ದೃಷ್ಟಿಯಿಂದಾಗಿ ಮತ ಜಡ್ಡುಗಟ್ಟಿದ ಸಂಪ್ರದಾಯವಾಗುತ್ತದೆ. ಸಮಾಜ ಚಲನೆಯಿಲ್ಲದೆ ಮಡುವಾಗುತ್ತದೆ. ಹೀಗೆ ಪರಿಸ್ಥಿತಿ ವಿಷಮಾವಸ್ಥೆಯನ್ನು ಮುಟ್ಟಿದಾಗ ದೈವೇಚ್ಛೆ ಅಥವಾ ನೈಸರ್ಗಿಕ ಅಗತ್ಯವೆಂಬಂತೆ ಧರ್ಮಸಂರಕ್ಷಕನೊಬ್ಬನ ಉದಯವಾಗುತ್ತದೆ"[೧]

ದೇಜಗೌ ಅವರ ಈ ಅಭಿಪ್ರಾಯ ಸತ್ಯದರ್ಶನವನ್ನು ಮಾಡಿಸುತ್ತದೆ. ಶತಶತಮಾನಗಳಿಂದಲೂ ನರಳುತ್ತಿರುವ ಜನರ ನೋವಿಗೆ ಮದ್ದಾಗಿ ಈ ಮಹಾನ್ ಪುರುಷರು ಜನ್ಮತಾಳಿದ್ದಾರೆ. ಮಾನವನೇ ಹುಟ್ಟುಹಾಕಿದ ಚಾತುರ್ವರ್ಣ ಪದ್ಧತಿಯಿಂದ ಧರ್ಮದ ಅರ್ಥವನ್ನೇ ದುರ್ಬಳಕೆ ಮಾಡಿಕೊಂಡ ಮಾನವನಲ್ಲಿರುವ ಮತಾಂಧತೆ, ಸ್ವಾರ್ಥ, ದುರಾಸೆ ಮುಂತಾದುವುಗಳೇ ಕಾರಣವಾಗಿರಬಹುದು. ಇವೆಲ್ಲಾ ಗುಣಗಳನ್ನು ಹೊರಹಾಕಿ ಮಾನವೀಯ ನೆಲೆಯಿಂದ ಹೋರಾಡಿದ ಬುದ್ಧ, ಬಸವ, ಅಂಬೇಡ್ಕರರು ಅಜ್ಞಾನ, ಅಂಧಕಾರ, ಅಸತ್ಯ ತುಂಬಿದ ಸಮಾಜಕ್ಕೆ ಬೆಳಕನ್ನು ನೀಡಿದ್ದಾರೆ. ಇವರ ಕುರಿತು ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವ ದೇಜಗೌ ಅವರ ವಿಚಾರಗಳು ಸಮಾಜವನ್ನು ತಿದ್ದುವ ನಿಟ್ಟಿನಲ್ಲಿ ಮತ್ತಷ್ಟು ಬೆಳಕನ್ನು ಬೀರುವುದರಲ್ಲಿ ಸಂದೇಹವಿಲ್ಲ.

ಬುದ್ಧ, ಬಸವ, ಅಂಬೇಡ್ಕರರ ಚಿಂತನೆಗಳನ್ನು ತೌಲನಿಕವಾಗಿ ವಿವರಿಸಿರುವ ದೇಜಗೌ ಅವರು ಬಸವಣ್ಣನವರ ವಿಚಾರಧಾರೆಗಳೊಂದಿಗೆ ಬುದ್ಧ ಹಾಗೂ ಅಂಬೇಡ್ಕರರ ಚಿಂತನೆಗಳನ್ನು ಹೋಲಿಸಿ, ತೌಲನಿಕವಾಗಿ ವಿವರಿಸಿದ್ದಾರೆ. ವಚನ ಸಾಹಿತ್ಯದ ನೆಲೆಯಲ್ಲಿ ಬುದ್ಧ-ಅಂಬೇಡ್ಕರರ ಚಿಂತನೆಗಳು ಹೇಗೆ ಹೊಂದಿಕೆಯಾಗಿವೆ ಎಂಬುದರ ಬಗ್ಗೆ ಅರಿವು ಮೂಡಿಸಿದ್ದಾರೆ. ೬ನೆಯ ಶತಮಾನದ ಬುದ್ಧ, ೧೨ನೆಯ ಶತಮಾನದ ಬಸವಣ್ಣ, ೧೯-೨೦ನೆಯ ಶತಮಾನದ ಅಂಬೇಡ್ಕರರ ಚಿಂತನೆಗಳು

ಪ್ರಸ್ತುತ ಸಮಾಜಕ್ಕೆ ಹೇಗೆ ಪೂರಕವಾಗಿವೆ ಎಂಬುದರ ಸೂಕ್ಷ್ಮತೆಯನ್ನು ದೇಜಗೌ ಅವರು ಮನಗಾಣಿಸಿದ್ದಾರೆ. ಬುದ್ಧನ ಸಂದೇಶಗಳಾಗಲಿ, ಅಂಬೇಡ್ಕರರ ಕ್ರಾಂತಿಕಾರಿ ನುಡಿಗಳಾಗಲಿ ಬಸವಣ್ಣನವರ ವಚನಗಳಲ್ಲಿ ಹೇಗೆ ಮಿಳಿತವಾಗಿವೆ ಎಂಬುದನ್ನು ಅನೇಕ ವಚನಗಳ ಮೂಲಕ ಉದಾಹರಿಸಿ ಅರ್ಥಮಾಡಿಸಿದ್ದಾರೆ.

ದೇಜಗೌ ಅವರು ಬುದ್ಧ-ಬಸವರ ಬಾಲ್ಯ ಜೀವನದ ಬಗ್ಗೆ ತಿಳಿಸಿಕೊಡುತ್ತಾರೆ. ಬುದ್ಧ ಶಾಖ್ಯ ವಂಶದ ದೊರೆ ಶುದ್ಧೋಧನ ಹಾಗೂ ಮಹಾಮಾಯೆ ಎಂಬ ದಂಪತಿಯ ಮಗನಾಗಿ ಕ್ರಿ.ಪೂ.೫೬೩ನೇ ವರ್ಷದ ವೈಶಾಖ ಶುದ್ಧ ಪೂರ್ಣಿಮೆಯ ದಿನ ಜನಿಸುತ್ತಾನೆ. ಇವನ ಹೆಸರು ಸಿದ್ಧಾರ್ಥ. ರಾಜಕುಮಾರನಿಗೆ ಅರಮನೆಯ ವೈಭೋಗದಲ್ಲಿಯೇ ಬೆಳೆದ ಸಿದ್ಧಾರ್ಥನಿಗೆ ಒಂದು ದಿನ ಸುತ್ತಾಟಕ್ಕೆ ಹೊರಟಾಗ ಲೌಕಿಕ ಪ್ರಪಂಚದ ಜನಜೀವನ ತಿಳಿಯುತ್ತದೆ. ಅಂಗವಿಕಲ, ರೋಗಿ, ವೃದ್ಧನನ್ನು ಕಂಡಾಗ ಯಾವುದು ಶಾಶ್ವತವಲ್ಲ ಎಂಬ ಅರಿವು ಮೂಡಲಾಗಿ ತನ್ನ ಹೆಂಡತಿ-ಮಗ, ಕುಟುಂಬದವರನ್ನೆಲ್ಲಾ ತ್ಯಜಿಸಿ ಪರಿತ್ಯಾಗಿಯಾಗಿ ಅರಮನೆ ಬಿಟ್ಟು ಹೊರಡುತ್ತಾನೆ. ಅಲ್ಲಿಂದ ಪ್ರಾರಂಭವಾದ ಅವನ ಯಾತ್ರೆಯಿಂದ ಅವನಿಗೆ ಅನೇಕ ಅನುಭವಗಳುಂಟಾಗುತ್ತವೆ. ಒಂದು ದಿನ ಜ್ಞಾನೋದಯವಾಗಲು 'ಬುದ್ಧ'ನಾಗುತ್ತಾನೆ. ಅನಂತರ ಬುದ್ಧನ ಸಂದೇಶಗಳು ಸಮಾಜ ಪರವಾಗಿ ಜಗತ್ತಿನಾದ್ಯಂತ ಪಸರಿಸುತ್ತವೆ.

ಬಸವಣ್ಣ ೧೧೩೧ರಲ್ಲಿ ಬಿಜಾಪುರ ಜಿಲ್ಲೆಯ ಬಾಗೇವಾಡಿಯಲ್ಲಿ ಮಾದಿರಾಜ-ಮಾದಲಾಂಬೆಯರ ಮಗನಾಗಿ ಜನಿಸಿದವರು. "ಬಸವಣ್ಣನವರು ಬುದ್ಧನಂತೆ ಬಾಯಲ್ಲಿ ಚಿನ್ನದ ಚಮಚವನ್ನಿಟ್ಟುಕೊಂಡು ಹುಟ್ಟಿದವರಲ್ಲ"[೨] ಎಂಬ ಮಾತನ್ನು ಹೇಳುತ್ತಾರೆ. ಬುದ್ಧನ ಜನನಾನಂತರ ಜ್ಯೋತಿಷಿಗಳು ಭವಿಷ್ಯ ನುಡಿದಂತೆ ಹುಟ್ಟಿದಾಗ ಕಣ್ಣು ಬಿಡದಿದ್ದ ಬಸವಣ್ಣನವರನ್ನು ಜಾತಿವೇದ ಮುನಿಗಳ ಬಳಿ ಕರೆದೊಯ್ದು ಲಿಂಗದರ್ಶನ ಮಾಡಿಸಲಾಗುತ್ತದೆ. ಅವರ ಮುಂದಿನ ಭವಿಷ್ಯಕ್ಕೆ ನಾಂದಿ ಹಾಡಲಾಗುತ್ತದೆ ಎಂಬ ವಿಚಾರವನ್ನು ತಿಳಿಸುತ್ತಾರೆ. ಬುದ್ಧ-ಬಸವರಿಗೆ ಬಾಲ್ಯದಲ್ಲಿಯೇ ಜೀವನ ದರ್ಶನವಾಗುತ್ತದೆ. ಸ್ವಂತ ಸುಖ ಮರೆತು ಸಮಾಜದ ಏಳ್ಗೆಗಾಗಿ ಮುಡಿಪಾಗುತ್ತಾರೆ. "ಸಾಮಾನ್ಯವಾಗಿ ಜಗತ್ತಿನ ಮಹಾವ್ಯಕ್ತಿಗಳೆಲ್ಲ ಸಿದ್ಧಪುರುಷರಾಗಿಯೇ ಜನ್ಮತಾಳುತ್ತಾರೆ"[೩] ಎಂಬ ದೇಜಗೌ ಅವರ ಮಾತಿನಲ್ಲಿಯೇ ಮಹಾನ್ ಪುರುಷರ ಜೀವನ ವ್ಯಕ್ತಿತ್ವ, ಸಾಧನೆಗಳು ಅನಾವರಣಗೊಳ್ಳುತ್ತವೆ. ಬುದ್ಧ, ಬಸವ, ಅಂಬೇಡ್ಕರರು ತಮಗಾದ ಅನುಭವಗಳನ್ನು ಅನುಭಾವಿಸಿ ಸಾಮಾಜಿಕ ಹೋರಾಟಕ್ಕಿಳಿದವರು. ಸಾಧನೆ ಅಷ್ಟು ಸುಲಭವಲ್ಲ ಎಂಬ ಸತ್ಯ ಇವರ ಜೀವನದಿಂದ ತಿಳಿದುಬರುತ್ತದೆ.

ಅವರ ಶ್ರಮ, ಸಂಕಟ, ಅನುಭವಿಸಿದ ನೋವು, ಹಿಂಸೆ, ಶೋಷಣೆಗಳು, ಎದುರಿಸಿದ ಸಮಸ್ಯೆಗಳು, ಕಠಿಣ ಪರಿಸ್ಥಿತಿಗಳಲ್ಲಿಯೂ ಧೃತಿಗೆಡದ ಅವರ ಆತ್ಮವಿಶ್ವಾಸ ಪ್ರತಿಯೊಬ್ಬರಿಗೂ ಮಾದರಿಯಾದುದು.

ಸಾಧನೆಗೆ ಸಂಸಾರವೆಂಬ ಬಂಧನ ಅಡ್ಡಿಯಾಗಬಹುದೆಂದು ಬಗೆದ ಬುದ್ಧನಂತೆ ಬಸವಣ್ಣನವರು ಕೂಡ "ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ, ಎನ್ನುವನು ಕಾಯಯ್ಯ ಕಾಯಯ್ಯ : ಹುರುಳಿಲ್ಲ, ಹುರುಳಿಲ್ಲ' ಎಂದು ಅಹೋರಾತ್ರಿ ಹಂಬಲಿಸುತ್ತಾರೆ. ನಾನಾ ಪರಿಯಲ್ಲಿ ಪೀಡಿಸುವ ಮಾಯೆಯಿಂದ ಪಾರುಮಾಡುವಂತೆ ಸಂಗಮದೇವನಲ್ಲಿ ಮೊರೆಯಿಡುತ್ತಾರೆ"[೪] ಬುದ್ಧನ ಆಲೋಚನೆಯೇ ಬಸವಣ್ಣನವರ ಆಲೋಚನೆಯೂ ಆಗಿತ್ತು ಎಂಬ ವಿಚಾರವನ್ನು ದೇಜಗೌ ಅವರು ಸಾಂದರ್ಭಿಕವಾಗಿ ತಿಳಿಸಿದ್ದಾರೆ. ಬಸವಣ್ಣನವರು ಲೌಕಿಕಾದಿ ಭಾವನೆಗಳ ಹತೋಟಿಗಾಗಿ ಹೇಗೆ ಪರಿತಪಿಸುತ್ತಿದ್ದರು ಎಂಬುದಕ್ಕೆ ಈ ವಚನ ಸಾಕ್ಷಿಯಾಗುತ್ತದೆ. ಈ ವಚನದ ಮಹತ್ವವನ್ನು ಪ್ರಾಮಾಣಿಕವಾಗಿ ಪ್ರತಿಯೊಬ್ಬರು ಅರಿತುದಾದರೆ ಪ್ರಪಂಚದಲ್ಲಿ ನಡೆಯುತ್ತಿರುವ ಅನ್ಯಾಯ, ಅತ್ಯಾಚಾರ, ಭ್ರಷ್ಟಾಚಾರಗಳಿಗೆ ಕಡಿವಾಣ ಹಾಕಬಹುದೇನೊ.

ಬುದ್ಧ, ಬಸವರನ್ನು ಪವಾಡ ಪುರುಷರೆಂದು ಕೆಲವರು ನಂಬುತ್ತಾರೆ. ಕೆಲವರು ಅಲ್ಲಗಳೆಯಲೂಬಹುದು. "ಬುದ್ಧನನ್ನು ಒಬ್ಬ ದೈವಸಂಭೂತನೆಂದು ಕರೆಯುವ ಬದಲು, ಒಬ್ಬ ಮಾನವತಾವಾದಿ, ಪ್ರಾಮಾಣಿಕ, ಚಿಂತಕ, ಕರುಣಾಮಯಿ ಎಂದು ಕರೆಯುವುದು ಅರ್ಥಪೂರ್ಣ"[೫] ಲೇಖಕರ ಅಭಿಪ್ರಾಯವು ಸಮಂಜಸವಾಗಿದೆ. ಹಾಗೆಯೇ ದೇಜಗೌ ಅವರು ಪವಾಡ ಪ್ರದರ್ಶನ ಶ್ರೇಯಸ್ಕರವಲ್ಲವೆಂಬ ಭಾವನೆ ಬಸವಣ್ಣರವದಾಗಿತ್ತು ಎಂದು ತಿಳಿಸುವುದರ ಜೊತೆಗೆ "ಬಸವಣ್ಣ ಪವಾಡ ಮೆರೆದಿರಲಿ, ಮೆರೆಯದಿರಲಿ ಅವರು ಸಾಧಿಸಿದ ಕಾರ್ಯಗಳಂತು ಪವಾಡ ಸದೃಶ್ಯವೆನ್ನಲಡ್ಡಿಯಿಲ್ಲ. ಹಾಗೆ ನೋಡಿದರೆ ಅವರ ಜೀವನವೇ ಒಂದು ಪವಾಡವೆಂದು ಧಾರಾಳವಾಗಿ ಹೇಳಬಹುದು"[೬] ದೇಜಗೌ ಅವರ ಅಭಿಪ್ರಾಯದಂತೆ ಮಹಾನ್‌ವ್ಯಕ್ತಿಗಳ ಸಾಧನೆಗಳೆಲ್ಲ ಪವಾಡಗಳೆಂದೇ ಬಿಂಬಿತವಾಗುತ್ತದೆ. ಜನಸಾಮಾನ್ಯರಲ್ಲಾಗದ ಎಷ್ಟೋ ಅದ್ಭುತಗಳು ಇವರಿಂದ ನಡೆಯುತ್ತವೆ. ಇಲ್ಲದ್ದನ್ನು ತೋರಿಸದೆ ಇದ್ದುದರಲ್ಲಿಯೇ ಲೋಪದೋಷಗಳನ್ನು ತಿದ್ದುವ, ಅರಿವು ಉಂಟುಮಾಡುವ ಕೆಲಸ ಇವರಿಂದ ಸಾಧ್ಯವಾಗಿದೆ. ಅಂದಿನ ಸಾಮಾಜಿಕ ಪರಿಸ್ಥಿತಿಯನ್ನು ಹತೋಟಿಗೆ ತಂದ ಇವರ ಕಾರ್ಯಗಳು ಪವಾಡಗಳೇ ಎನ್ನಬಹುದು.

ಪುರೋಹಿತಶಾಹಿ ವರ್ಗದ ಹಿಡಿತದಲ್ಲಿದ್ದ ಸಮಾಜದಲ್ಲಿ ಕೆಳವರ್ಗದವರನ್ನು ಮುಖ್ಯವಾಹಿನಿಗೆ ತರುವುದು ಸವಾಲಿನ ವಿಷಯವೇ ಆಗಿತ್ತು. ಕೆಳವರ್ಗದವರಲ್ಲಿದ್ದ ಅಜ್ಞಾನ, ಮೂಢನಂಬಿಕೆಗಳನ್ನು ಸದಾ ವಿರೋಧಿಸುತ್ತಿದ್ದರು. ಅವರಲ್ಲಿ ವೈಚಾರಿಕ ಮನೋಭಾವ ಮೂಡಿಸಲು ಹೆಣಗಾಡಿದ ಬಸವಣ್ಣನವರು.

"ಮಡಕೆದೈವ, ಮೊರದೈವ, ಬೀದಿಯ ಕಲ್ಲುದೈವ,
ಹಣಿಗೆ ದೈವ, ಬಿಲ್ಲನಾರಿದೈವ, ಕಾಣಿರೋ,
ಕೊಳಗ ದೈವ, ಗಿಣ್ಣಿಲು ದೈವ ಕಾಣಿರೋ
ದೈವ ದೈವವೆಂದು ಕಾಲಿಡಲಿಂಬಿಲ್ಲಾ"[೭]

ಎಂದು ಜನರ ಅಜ್ಞಾನಕ್ಕೆ ಕೊರಗುತ್ತಾರೆ.

ಏಕದೇವ ಆರಾಧನೆಯನ್ನು ಬಸವಣ್ಣ ಒಪ್ಪಿದ್ದರು. ಪ್ರತಿಯೊಬ್ಬರು ಒಂದೊಂದು ದೇವರನ್ನು ಪೂಜಿಸುವುದರಿಂದ ಏಕತೆ ಮಾಯವಾಗುತ್ತದೆ ಎಂದು ನಂಬಿದ್ದ ಬಸವಣ್ಣನವರ ಮನದಿಂಗಿತವನ್ನು ದೇಜಗೌ ಈ ವಚನದ ಮೂಲಕ ತಿಳಿಸಿದ್ದಾರೆ. ಜೊತೆಗೆ ಧರ್ಮದ ಕಲ್ಪನೆ ಜನರಲ್ಲಿ ಹೇಗಿತ್ತು ಎಂಬುದರ ವಿವರವನ್ನು ನೀಡುತ್ತಾರೆ. ಎಲ್ಲರನ್ನೂ ಕಾಪಾಡುವುದೇ ಧರ್ಮ ಎಂದು ತಿಳಿದಿರುವಂತೆ "ಮಾನವನಲ್ಲಿರುವ ಪಶ್ವಂಶಗಳನ್ನು ನೀತಿನಿಯಮಗಳಿಂದ ಶಮದಮಾದಿಗಳಿಂದ ನಿಯಂತ್ರಿಸಿ, ದೇವಾಂಶಗಳನ್ನು ಆತ್ಮಾನುಸಂಧಾನದಿಂದ ವಿಕಸಿತಗೊಳಿಸುವುದೇ ಧರ್ಮ"[೮] ಎಂಬ ವ್ಯಾಖ್ಯೆಯನ್ನು ನೀಡುತ್ತಾರೆ.

ಪ್ರತಿಯೊಬ್ಬ ಮನುಷ್ಯನಿಗೂ ಧರ್ಮದ ಅರ್ಥ ಅರಿವಾಗಲೇ ಬೇಕು. ಅದು ಇಂದು ಅನಿವಾರ್ಯವೂ ಆಗಿದೆ. ಇಂದು ಧರ್ಮದ ಹೆಸರಿನಲ್ಲಿಯೇ ನಡೆಯುತ್ತಿರುವ ಮನುಷ್ಯ–ಮನುಷ್ಯರ ನಡುವಿನ ಕಗ್ಗೊಲೆಗಳಿಗೆ ಮಿತಿಯಿಲ್ಲದಾಗಿದೆ. ಏಕದೇವತಾರಾಧನೆಯನ್ನು ಪ್ರೋತ್ಸಾಹಿಸಿದ ಬಸವಣ್ಣ ಸರಳ ಸುಲಭ ಭಾಷೆಯಲ್ಲಿ ಅದರ ಮಹತ್ವವನ್ನು ಸಾರಿದರು.

"ದೇವನೊಬ್ಬ ನಾಮಹಲವು
ಪರಮ ಪತಿವ್ರತೆಗೆ ಗಂಡನೊಬ್ಬ
ಮತ್ತೊಂದಕ್ಕೆರಗಿದರೆ ಕಿವಿಮೂಗಕೊಯ್ವನು
ಹಲವು ದೈವದ ಎಂಜಲ ತಿಂಬವರನೇನೆಂಬೆ
ಕೂಡಲ ಸಂಗಮದೇವಾ"[೯]

ಎಂದು ಜನಸಾಮಾನ್ಯರ ಮನಸ್ಸಿಗೆ ನಾಟುವ ರೀತಿ ನೇರವಾಗಿ ತಿಳಿಸಿದ್ದಾರೆ. ದೇಜಗೌ ವರು "ಭರತಖಂಡದಲ್ಲಿ ಬೌದ್ಧಮತ ವಿನಾ, ಉಳಿದ ಮತಗಳು ಶ್ರೀಸಾಮಾನ್ಯನನ್ನು ಮುಟ್ಟಿದಂತೆ ತೋರುವುದಿಲ್ಲ"[೧೦] ಎಂಬ ಅಭಿಪ್ರಾಯದೊಂದಿಗೆ ಏಕದೇವತಾರಾಧನೆ–ಯನ್ನು ಬೌದ್ಧಧರ್ಮಿಯರು ಅನುಸರಿಸುತ್ತಿದ್ದರೆಂಬ ವಿಷಯವನ್ನು ತಿಳಿಸುತ್ತಾರೆ. ಹಿಂದೂಧರ್ಮ, ಕ್ರೈಸ್ತ, ಇಸ್ಲಾಂ ಧರ್ಮದಂತೆ ಪಂಗಡಗಳು, ಒಳಜಾತಿಗಳು ಬೌದ್ಧಧರ್ಮದಲ್ಲಿಲ್ಲ. ಬುದ್ಧನೊಬ್ಬನನ್ನು ಮಾತ್ರ ಪೂಜಿಸುತ್ತಾರೆ.

ವೈದಿಕ ಧರ್ಮದ ತತ್ವಗಳನ್ನು ಕಠೋರವಾಗಿ ವಿರೋಧಿಸುತ್ತಿದ್ದ ಬಸವಣ್ಣನವರು ಇಡೀ ಸಮಾಜದ ಅಧೋಗತಿಗೆ ಪುರೋಹಿತರೇ ಕಾರಣ ಎಂದು ಅಭಿಪ್ರಾಯಪಡುತ್ತಾರೆ. ಇದೇ ಅಭಿಪ್ರಾಯವನ್ನು ದೇಜಗೌ ಅವರು ಐತಿಹಾಸಿಕ ಘಟನೆಯ ಮೂಲಕ ಸ್ಪಷ್ಟಪಡಿಸುತ್ತಾರೆ. "ಘಸ್ನಿ ಮೊಹಮದ್ ಮೊದಲಾದ ವಿದೇಶಿಯರು ಇಲ್ಲಿಯ ಭೌತಿಕ ಸಂಪತ್ತನ್ನು ಕೊಳ್ಳೆ ಹೊಡೆದರೆ, ಈ ಸ್ವದೇಶಿಯರು ಮಾನವತೆಯನ್ನೇ ಲೂಟಿ ಮಾಡಿದ್ದುಂಟು"[೧೧] ವಿದೇಶಿಯರ ಧಾಳಿಗೆ ಸಿಕ್ಕು ನಲುಗಿದ ಭಾರತ ಆಂತರಿಕವಾಗಿಯೇ ಎಷ್ಟೆಲ್ಲಾ ನ್ಯೂನ್ಯತೆಗಳನ್ನು ಹೊಂದಿತ್ತು ಎಂಬ ವಿಚಾರ ಅರಿವಾಗುತ್ತದೆ.

ದೇವಾಲಯ ನಿರ್ಮಾಣವಾಗಲಿ, ಮೂರ್ತಿಪೂಜೆಯಾಗಲಿ ಮುಖ್ಯವಾದುದಲ್ಲ ಎಂದು ನಂಬಿದ್ದ ಬಸವಣ್ಣ ಕಾಯವೇ ದೇವಾಲಯವೆಂಬ ನಂಬಿಕೆಯನ್ನು ಮೂಡಿಸಿದರು.

"ಉಳ್ಳವರು ಶಿವಾಲಯವ ಮಾಡುವರು
ನಾನೇನ ಮಾಡುವೆ? ಬಡವನಯ್ಯಾ
ಎನ್ನ ಕಾಲೇ ಕಂಬ, ದೇಹವೇ ದೇಗುಲ
ಸಿರ ಹೊನ್ನ ಕಳಸವಯ್ಯಾ
ಕೂಡಲ ಸಂಗಮದೇವ, ಕೇಳಯ್ಯಾ
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲಾ"[೧೨]

ಬಡತನದ ಬೇಗೆಯಲ್ಲಿ ನರಳುತ್ತಿರುವ ಲಕ್ಷಾಂತರ ಜನರ ನೋವಿಗೆ ಸ್ಪಂದಿಸದ ಶ್ರೀಮಂತರು ದೇವಾಲಯಗಳಿಗಾಗಿ ಖರ್ಚು ಮಾಡುವ ಹಣ ವ್ಯರ್ಥ ಎಂದು ೧೨ನೆಯ ಶತಮಾನದಲ್ಲಿಯೇ ಹೇಳಿದ್ದಾರೆ. ಆದರೆ ೨೧ನೆಯ ಶತಮಾನದಲ್ಲಿಯೂ ಶ್ರೀಮಂತಿಕೆಯ ಪ್ರದರ್ಶನ ಕಡಿಮೆಯಾಗದಿರುವುದು ವಿಪರ್ಯಾಸವೇ ಆಗಿದೆ.

ತಾವು ಜನಿಸಿದ ಜಾತಿಯನ್ನೇ ಜರಿಯುವ ಬಸವಣ್ಣನವರು ಮೇಲ್ವರ್ಗದ ಜನ ನಾಡಿಗೆ ಅಪಚಾರವನ್ನು ಮಾಡುತ್ತಾರೆ ಇದೆಲ್ಲವನ್ನೂ ಬಸವಣ್ಣನವರೇ ಹೊರಗೆಳೆದಿದ್ದಾರೆ. 'ಕಷ್ಟಜಾತಿಯ ಜನ್ಮದಲಿ ಜನಿಸಿದೆ, ಎನಗಿದು ವಿಧಿಯೆ' ಎಂದು ನೊಂದುಕೊಳ್ಳುತ್ತಾರೆ.

ಹೊಲೆಯ ಮಾದಿಗ ಭಕ್ತನಾದರೆ
ಆತನ ಮನೆಯ ಸೊಣಗಂಗೆ
ಪಂಚಮಹಾವಾದ್ಯದಲ್ಲಿ ಸನ್ಮಾನವ ಮಾಡನೆ?
ನೆಲನನುಗ್ಘಡಿಪೆ 'ಉಘೇ, ಚಾಂಗುಭಲರೇ' ಎಂದು
ಕುಲದಲಧಿಕ ಹಾರುವಂಗೆ ಸಿದ್ದಿಗೆಯ್ಯೆಸಲೆ
ನಿಮ್ಮ ಶರಣರ ಮಹಿಮೆ ಘನಕ್ಕೆ ಘನ
ಎಲೆ ಕೂಡಲ ಸಂಗಮದೇವಾ, ನಿಮ್ನ ನಂಬದವ ಹೊಲೆಯ[೧೩]

ಸಮಾಜದ ಕಟ್ಟಕಡೆಯ ಮನುಷ್ಯನೂ ಗೌರವಕ್ಕೆ ಅರ್ಹನು ಎಂಬುದು ಬಸವಣ್ಣನವರ ಅಭಿಮತವಾಗಿದೆ.

ಚೆನ್ನಯ್ಯನ ಮನೆಯ ದಾಸಿಯ ಮಗನು
ಕಕ್ಕಯ್ಯನ ಮನೆಯ ದಾಸಿಯ ಮಗಳು
ಇವರಿಬ್ಬರು ಹೊಲದಲಿ ಬೆರಣಿಗೆ ಹೋಗಿ ಸಂಗವ ಮಾಡಿದರು
ಇವರಿಬ್ಬರಿಗೆ ಹುಟ್ಟಿದ ಮಗ ನಾನು
ಕೂಡಲ ಸಂಗಮದೇವ ಸಾಕ್ಷಿಯಾಗಿ[೧೪]

ಬಸವಣ್ಣ ಒಬ್ಬ ವಿಶ್ವಮಾನವ ಎಂಬುದರಲ್ಲಿ ಸಂದೇಹವಿಲ್ಲ. ಅವರು ಮಾಡಿಕೊಂಡಿರುವ ಈ ನಿವೇದನೆಯಿಂದ ಬಸವಣ್ಣನವರು ಮತ್ತಷ್ಟು ಉನ್ನತ ಮಟ್ಟಕ್ಕೇರುತ್ತಾರೆ. ದೇಜಗೌ ಅವರು ಅದನ್ನು ದೃಢಪಡಿಸಿದ್ದಾರೆ.

ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ
ಜಲವೊಂದೆ ಶೌಚಾಚಮನಕ್ಕೆ
ಕುಲವೊಂದೆ ತನ್ನತಾನರಿದವಂಗೆ
ಫಲವೊಂದೆ ಷಡುದರುಶನ ಮುಕ್ತಿಗೆ
ನಿಲವೊಂದೆ, ಕೂಡಲ ಸಂಗಮದೇವಾ, ನಿಮ್ಮನರಿದವಂಗೆ

ಪ್ರಕೃತಿ ಎಲ್ಲರಿಗೂ ಸಮಾನ ಅವಕಾಶಗಳನ್ನು ಕಲ್ಪಿಸಿದೆ ಗಾಳಿ, ಬೆಳಕು, ನೀರು, ಭೂಮಿ ಎಲ್ಲರಿಗೂ ಒಂದೇ ಅವುಗಳಿಂದ ಪಡೆಯುವ ಅನುಕೂಲಗಳು ಒಂದೇ ಅಂದ ಮೇಲೆ ಮನುಷ್ಯ ಮನುಷ್ಯರ ನಡುವಣ ತಾರತಮ್ಯ ಯಾವುದಕ್ಕಾಗಿ ಈ ವಚನವನ್ನು ಅರ್ಥಮಾಡಿಕೊಂಡಾಗ ಮನಸ್ಸು ವಿಶಾಲವಾಗಬಹುದು. ಆಗ ಇಡೀ ವಿಶ್ವವೇ ಜಾತ್ಯಾತೀತವಾಗುತ್ತದೆ. ಅಸಮಾನತೆಯೇ ದೂರವಾಗುತ್ತದೆ. ಅದು ಅಷ್ಟೊಂದು ಸುಲಭ ಸಾಧ್ಯವೇ ಎಂಬ ಪ್ರಶ್ನೆ ಮೂಡುತ್ತದೆ. ಏಕೆಂದರೆ ವಿಶಾಲ ಮನೋಭಾವ ಬೆಳೆಸಿಕೊಳ್ಳಲು ಯಾರ ಮನಸ್ಸು ಸುಲಭವಾಗಿ ಪ್ರಯತ್ನಪಡುವುದಿಲ್ಲ. ಬುದ್ಧ, ಬಸವ, ಅಂಬೇಡ್ಕರ್, ಸ್ವಾಮಿ ವಿವೇಕಾನಂದ, ಗಾಂಧೀಜಿ ಮೊದಲಾದ ಮಹಾತ್ಮರಿಂದ ಮಾತ್ರ ಸಾಧ್ಯ. ದೇಜಗೌ ಅವರು ಈ ವಿಚಾರವನ್ನು ಮನದಟ್ಟು ಮಾಡಿಸಿದ್ದಾರೆ. ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಒಂದೇ ರೀತಿ ಆಲೋಚಿಸಿರುವ ಬುದ್ಧ-ಬಸವರ ಚಿಂತನೆಗಳಲ್ಲಿ ಹೊಂದಿಕೆಯಾಗದ ಒಂದು ಅಂಶವನ್ನು ದೇಜಗೌ ಅವರು ಗುರುತಿಸಿದ್ದಾರೆ. ಅದೇ ಸ್ತ್ರೀ ಸ್ವಾತಂತ್ರ್ಯಕ್ಕೆ ಸಂಬಂಧಪಟ್ಟಂತೆ ಇಬ್ಬರಲ್ಲಿಯೂ ವ್ಯತ್ಯಾಸವನ್ನು ಗುರುತಿಸಬಹುದಾಗಿವೆ. ಸ್ತ್ರೀ ಸ್ವಾತಂತ್ರ್ಯಕ್ಕೆ ಅನರ್ಹಳು ಎಂಬ ಅಭಿಪ್ರಾಯ ವೇದಗಳ ಕಾಲದಿಂದಲೂ ಇದೆ. ಈಶ್ವರನ ಅರ್ಧಾಂಗಿಯೇ ಆದರೂ ದೇವಾಲಯಗಳಲ್ಲಿ ಪ್ರವೇಶವಿಲ್ಲ. ಪುರುಷರ ಸ್ಥಾನಮಾನ ಸ್ತ್ರೀಗೆ ಅಂದೂ ಇರಲಿಲ್ಲ. ಇಂದೂ ಇಲ್ಲ. "ಪ್ಲೇಟೋ - ನಾನು ಹೆಣ್ಣಾಗಿ ಹುಟ್ಟಲಿಲ್ಲ. ಗಂಡಸಾಗಿ ಹುಟ್ಟಿದೆನಲ್ಲ. ಅದಕ್ಕಾಗಿ ಭಗವಂತನಿಗೆ ಧನ್ಯವಾದಗಳು"[೧೫] ಎಂಬ ಪ್ಲೇಟೋನ ಹೇಳಿಕೆಯಲ್ಲಿ ಹೆಣ್ಣಾಗಿ ಹುಟ್ಟುವುದು ಎಷ್ಟು ಘೋರತರವಾದುದು ಎಂಬುದು ಬಿಂಬಿತವಾಗಿದೆ. ಇಂತಹ ದಾರ್ಶನಿಕರೇ ಸ್ತ್ರೀಜನ್ಮವನ್ನು ವಿರೋಧಿಸುತ್ತಾರೆಂದರೆ ಸಾಮಾನ್ಯ ಜನರು ಇದನ್ನೇ ಬೆಂಬಲಿಸುತ್ತಾರೆ. ಇದಕ್ಕೆ ಹೋಲಿಸಿದರೆ ಬಸವಣ್ಣನವರ ವಿಶಾಲದೃಷ್ಟಿಕೋನ ಎಷ್ಟಿತ್ತೆಂಬುದು ಅರ್ಥವಾಗುತ್ತದೆ. ವಚನಸಾಹಿತ್ಯದ ಹೆಗ್ಗಳಿಕೆಯೆಂದರೆ ಸ್ತ್ರೀ ಸ್ವಾತಂತ್ರ್ಯ ಸಮಾಜದಲ್ಲಿ ಪುರುಷನಷ್ಟೇ ಸಮಾನಸ್ಥಾನಮಾನಗಳು ಲಭ್ಯವಾಗಿದ್ದವು. ಅನುಭವಮಂಟಪದಲ್ಲಿ ಪುರುಷರಿಗೆ ಸಮಾನವಾಗಿ ಚರ್ಚೆಯಲ್ಲಿ ಭಾಗವಹಿಸುವ ಅವಕಾಶ ಪಡೆದಿದ್ದಳು. ಸಾಹಿತ್ಯ ರಚನೆಯಲ್ಲಿ ಸ್ತ್ರೀಯರ ಸಾಧನೆ ಕಡಿಮೆಯೇನಲ್ಲ. ಆದರೆ ಬುದ್ಧ ಸ್ತ್ರೀ ಸ್ವಾತಂತ್ರ್ಯವನ್ನು ನಿರಾಕರಿಸಿದ. ಇದೊಂದು ವಿಚಾರದಲ್ಲಿ ಬುದ್ಧ-ಬಸವರಲ್ಲಿ ಭಿನ್ನತೆ ಗೋಚರಿಸುತ್ತದೆ. "ಬುದ್ಧಸಂಘವನಿಗೂ ಅವಳಿಗೆ ದೀಕ್ಷೆಕೊಡುವ ವಿಚಾರದಲ್ಲಿ ಅನುಮಾನವಿದ್ದ ಸಂಗತಿ ಸರ್ವವೇದ್ಯ"[೧೬] ಸಮಾನತೆಯನ್ನು ಸಾರಿದ ಬುದ್ಧನ ಸ್ತ್ರೀ ವಿರೋಧಿ ಚಿಂತನೆಗಳು

ಅಚ್ಚರಿಮೂಡಿಸುತ್ತದೆ. ಪುರುಷನಷ್ಟೇ ಸರ್ವಸಮಾನಳು ಎಂದು ಸಾರಿದ ಅವಕಾಶ ಕಲ್ಪಿಸಿಕೊಟ್ಟವರಲ್ಲಿ ಪ್ರಪಂಚದ ಮೊದಲ ಸ್ಥಾನ ಬಸವಣ್ಣನವರಿಗೆ ಲಭಿಸುತ್ತದೆ ಎಂಬ ವಿಚಾರವನ್ನು ದೇಜಗೌ ಅವರು ಸ್ಪಷ್ಟಪಡಿಸಿದ್ದಾರೆ.

ಬುದ್ಧನ ಚಿಂತನೆಗಳನ್ನು, ತತ್ವೋಪದೇಶಗಳನ್ನು ಬುದ್ಧನ ಶಿಷ್ಯರು ಸಂಗ್ರಹ ಮಾಡಿಟ್ಟಿರುವುದಾದರೂ ಅದರಲ್ಲಿ ಎಷ್ಟು ಪ್ರಾಮಾಣಿಕವಾಗಿ, ಎಷ್ಟು ಹೊಸ ಹೊಸ ವಿಚಾರಗಳು ಸೇರ್ಪಡೆಯಾಗಿವೆ ಎಂದು ಹೇಳುವುದು ಕಷ್ಟ. ಆದರೆ ಬಸವಣ್ಣನವರ ಚಿಂತನೆಗಳೆಲ್ಲಾ ವಚನಗಳಲ್ಲೇ ಅಡಕವಾಗಿರುವುದರಿಂದ ಬಸವಣ್ಣನವರ ಚಿಂತನೆಗಳೇ ಎಂಬುದು ಸ್ಪಷ್ಟವಾಗುತ್ತದೆ. ಆದರೆ ಅವರ ಜೀವನ ಚರಿತ್ರೆಗೆ ಸಂಬಂಧಪಟ್ಟಂತೆ ಅವರ ನಂತರದ ಕವಿಗಳು ತಮಗಿಷ್ಟಬಂದಂತೆ ರಚಿಸಿರಲೂಬಹುದು ಎಂಬ ಮಾಹಿತಿಯನ್ನು ದೇಜಗೌ ಅವರು ನೀಡಿದ್ದಾರೆ.

ಕಾಲಾನಂತರದಲ್ಲಿ ಬೌದ್ಧಧರ್ಮ ತನ್ನ ಮಹತ್ವವನ್ನು ಕಳೆದುಕೊಳ್ಳುತ್ತಾ ಬಂದಿತು. ಇದಕ್ಕೆ ಅನೇಕ ಕಾರಣಗಳಿರಬಹುದು. ಅನ್ಯಧರ್ಮಗಳ ಪ್ರಭಾವ, ದಬ್ಬಾಳಿಕೆ ಏನಾದರೂ ಕಾರಣಗಳು ಇರಬಹುದು. ಏನೇ ಇದ್ದರೂ ಬುದ್ಧ ನೀಡಿರುವ ಪಂಚಶೀಲ ತತ್ವಗಳು ಜೀವಂತವಾಗಿಯೇ ಇವೆ.

ಬಸವಣ್ಣನವರ ಸಾಧನೆ ಕುರಿತು ದೇಜಗೌ ಅವರು "ಕರ್ನಾಟಕದಲ್ಲಲ್ಲದೆ ತಮಿಳುನಾಡಿನಲ್ಲಿಯೋ, ಬಂಗಾಳದಲ್ಲಿಯೋ, ಇಲ್ಲವೇ ಪಾಶ್ಚಾತ್ಯ ರಾಷ್ಟ್ರಗಳಲ್ಲಿಯೋ ಬಸವಣ್ಣನವರು ಹುಟ್ಟಬೇಕಾಗಿತ್ತು. ಹುಟ್ಟಿದ್ದರೆ ಅವರಿಗೂ, ಅವರ ವಚನಗಳಿಗೂ, ಅವರು ಹುಟ್ಟಿದ ನೆಲಕ್ಕೂ, ಅವರ ಉಸಿರಾದ ತಾಯಿನುಡಿಗೂ ವಿಶ್ವಮಾನ್ಯತೆ ದೊರಕುತ್ತಿತ್ತು".[೧೭] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ೧೨ನೆಯ ಶತಮಾನದ ಸಾಮಾಜಿಕ ಸಮಸ್ಯೆಗಳನ್ನು ಹೋಗಲಾಡಿಸುವಲ್ಲಿ, ಜನರಲ್ಲಿ ಜಾಗೃತಿ ಮೂಡಿಸುವಲ್ಲಿ ಕೈಕೊಂಡ ಕಾರ್ಯಗಳಲ್ಲಿ ಹಲವು ಪ್ರಥಮಗಳಿಗೆ ನಾಂದಿ ಹಾಡಿದ ಬಸವಣ್ಣನವರ ಕೀರ್ತಿ ಎಲ್ಲೆಡೆ ಹಬ್ಬಿದೆ, ಹಬ್ಬಲೇ ಬೇಕಾಗಿದೆ. ಕನ್ನಡಿಗನಾದ ಬಸವಣ್ಣನವರ ವಚನಗಳ ಮಹತ್ವವನ್ನು ಪ್ರಾಮಾಣಿಕವಾಗಿ ಗ್ರಹಿಸುವುದರಲ್ಲಿ ಕನ್ನಡಿಗರಾದ ನಾವೇ ಎಡವುತಿರಬಹುದೇನೋ ಎಂಬ ಯೋಚನೆ ಮೂಡುತ್ತದೆ. ಇಡೀ ಜೀವಿತಾವಧಿಗೆ ಬೇಕಾದ ಮಾರ್ಗದರ್ಶನ, ಬೋಧನೆಗಳು ವಚನಸಾಹಿತ್ಯದಲ್ಲಿವೆ. ವಚನಗಳು ಜೀವನದರ್ಶನ ಮಾಡಿಸುತ್ತವೆ. ವಚನ ಸಾಹಿತ್ಯದ ಆಳವಾದ ಅಧ್ಯಯನ ಮಾಡಿ, ಅವುಗಳ ತತ್ವವನ್ನು ಗ್ರಹಿಸಿ ಜೀವನದಲ್ಲಿ ಅಳವಡಿಸಿಕೊಂಡು ಬದುಕಿದರೆ ಯಾವ ಪುರಾಣ ಗ್ರಂಥಗಳ, ಉಪದೇಶಗಳ ಅಗತ್ಯವೇ ಬರುವುದಿಲ್ಲ.

ವೈದಿಕ ಪರಂಪರೆಯಲ್ಲಿದ್ದ ಹಲವಾರು ನ್ಯೂನ್ಯತೆಗಳನ್ನು ಸರಿಪಡಿಸುವಲ್ಲಿ ವಚನ ಸಾಹಿತ್ಯದ ಕೊಡುಗೆ ಅಪಾರವಾಗಿದೆ. ಅದರಲ್ಲಿಯೇ ಬಸವಣ್ಣನವರ ಕೊಡುಗೆ ಅದ್ಭುತ ಎಂದೇ ಹೇಳಬಹುದು.

ಬುದ್ಧನ ಪಂಚಶೀಲ ತತ್ವಗಳಾದ

೧. ನಾನು ಪ್ರಾಣಹತ್ಯೆ ಮಾಡದಿರುವ ಶಿಕ್ಷಾಪದವನ್ನು ಕೈಗೊಳ್ಳುತ್ತೇನೆ.

೨. ನಾನು ಕಳ್ಳತನ ಮಾಡದಿರುವ ಶಿಕ್ಷಾಪದವನ್ನು ಕೈಗೊಳ್ಳುತ್ತೇನೆ.

೩. ನಾನು ಕಾಮ ಮಿಥ್ಯಾಚಾರ ಮಾಡದಿರುವ ಶಿಕ್ಷಾಪದವನ್ನು ಕೈಗೊಳ್ಳುತ್ತೇನೆ.

೪. ನಾನು ಸುಳ್ಳು ಹೇಳದಿರುವ ಶಿಕ್ಷಾಪದವನ್ನು ಕೈಗೊಳ್ಳುತ್ತೇನೆ.

೫. ಸುರೆ, ಹೆಂಡ ಮೊದಲಾದ ಮಾದಕ ವಸ್ತುಗಳಿಂದ ಬಿಡುಗಡೆ ಪಡೆಯುವ ಶಿಕ್ಷಣವನ್ನು ಕೈಗೊಳ್ಳುತ್ತೇನೆ.[೧೮]

ಹಾಗೆಯೇ ಬಸವಣ್ಣನವರ ಈ ವಚನ

ಕಳಬೇಡ ಕೊಲಬೇಡ, ಹುಸಿಯ ನುಡಿಯಲು ಬೇಡ
ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ[೧೯]

ಸಪ್ತಶೀಲ ತತ್ವದಂತಿದೆ. ಬುದ್ಧನ ತತ್ವ, ಬಸವಣ್ಣನವರ ಈ ತತ್ವಗಳ ಅರಿತುದಾದರೆ ಬೇರೆ ಯಾವ ಉಪದೇಶವೇ ಬೇಡ. ಮನುಷ್ಯ ತನ್ನನ್ನು ತಾನು ಅರಿಯಲು ಸಮಾಜಕ್ಕೆ ಉಪಕಾರಿಯಾಗಿರಲು.

**ಬಸವಣ್ಣ – ಅಂಬೇಡ್ಕರ್**

ಬುದ್ಧನ ಚಿಂತನೆಗಳು ಬಸವಣ್ಣನವರ ಚಿಂತನೆಗಳೊಂದಿಗೆ ಹೇಗೆ ಬೆರೆತುಹೋಗಿವೆ. ಎಷ್ಟು ಸಾಮ್ಯತೆ ಹೊಂದಿವೆ, ವ್ಯತ್ಯಾಸಗಳಿವೆ. ಹೇಗೆ ಸಮಾನತೆಯನ್ನು ಸಾಧಿಸಿವೆ, ಸಮಾಜಮುಖಿಯಾಗಿವೆ ಎಂಬ ವಿಚಾರಗಳನ್ನು ವಿವರವಾಗಿ, ತೌಲನಿಕವಾಗಿ ದೇಜಗೌ ಅವರು ತಿಳಿಸಿದ್ದಾರೆ. ಹಾಗೆಯೇ ಅಂಬೇಡ್ಕರ್ ಅವರ ಚಿಂತನೆಗಳು ಬಸವಣ್ಣನವರ ಚಿಂತನೆಗಳೊಂದಿಗೆ ಹೇಗೆ ಬೆಸೆದುಕೊಂಡಿವೆ ಎಂಬ ವಿಷಯವನ್ನು ತೌಲನಿಕವಾಗಿ ವಿವರಿಸುತ್ತಾರೆ.

ಭರತಖಂಡವೇ ಗುರುತಿಸುವಂತೆ ಬಸವಣ್ಣ–ಅಂಬೇಡ್ಕರರಿಬ್ಬರೂ ಕ್ರಾಂತಿಕಾರಿ ಧೋರಣೆಯುಳ್ಳ ಮಹಾನ್ ಮಾನವತಾವಾದಿಗಳು, ಸಾಧಕರು, ಸಮಾಜ ಸುಧಾರಕರು, ಅಸ್ಪೃಶ್ಯರ ದನಿಯಾಗಿದ್ದವರು. ಇಬ್ಬರ ಹೋರಾಟ ಕ್ರಮದಲ್ಲಿ ವಿಭಿನ್ನತೆಯಿದ್ದರೂ ಉದ್ದೇಶ ಒಂದೇ ಆಗಿತ್ತು. ಅದೇ ಸಮಾನತೆ, ಮಾನವೀಯತೆಯ ಸ್ಥಾಪನೆ. ೬ನೆಯ ಶತಮಾನದ ಬುದ್ಧನ ಸಮಾಜ ಚಿತ್ರಣವೇ ಬೇರೆ, ೧೨ನೆಯ ಶತಮಾನದ ಬಸವಣ್ಣನ ಸಮಾಜ ಚಿತ್ರಣವೇ ಬೇರೆ. ಇವೆರಡಕ್ಕಿಂತ ಭಿನ್ನವಾದುದು ೧೯–೨೦ನೆಯ ಶತಮಾನದ್ದು. ಭಾರತ ವಿದೇಶೀಯರ ಆಕ್ರಮಣಕ್ಕೆ ಸಿಲುಕಿ ಸ್ವಾತಂತ್ರ್ಯ ಪಡೆಯಲು ಹೋರಾಟ ನಡೆಯುತ್ತಿದ್ದ ಕಾಲವಾಗಿತ್ತು. ಇಡೀ ಭಾರತವೇ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದರೆ ಅಂಬೇಡ್ಕರರು ಶೋಷಿತರ ಹಕ್ಕು ಸ್ಥಾಪನೆಗಾಗಿ ಹೋರಾಡುತ್ತಿದ್ದರು. ಧಾರ್ಮಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಕೀಳರಿಮೆಗೆ ಒಳಗಾದ ಕೆಳವರ್ಗದವರ ನೋವಿಗೆ ಸ್ಪಂದಿಸಿದ ಅಂಬೇಡ್ಕರರು ಸ್ವತಃ ತಾವೇ ಶೋಷಿತ ವರ್ಗಕ್ಕೆ ಸೇರಿದವರು.

ವಿದೇಶೀಯರೇ ಮನಸ್ಸು ಮಾಡಿದ್ದರೆ ಭಾರತದಲ್ಲಿ ಧಾರ್ಮಿಕ, ಸಾಮಾಜಿಕ, ರಾಜಕೀಯ ಸಮಾನತೆಗೆ ಪ್ರಯತ್ನಪಡಬಹುದಿತ್ತು. ಆದರೆ ಅವರಿಗೆ ಅದು ಬೇಡವಾದ ವಿಷಯವಾಗಿತ್ತು. ಸ್ವಾರ್ಥ, ಸಂಪತ್ತಿನ ಲೂಟಿ, ಅಧಿಕಾರದ ವ್ಯಾಮೋಹ ಅವರಿಗೆ ಮುಖ್ಯವಾಗಿತ್ತು. ಆದರೆ ವಿದೇಶೀಯರಿಂದ ಆಗಿರುವ ಶೈಕ್ಷಣಿಕ ಸುಧಾರಣೆಗಳನ್ನು ತಳ್ಳಿಹಾಕುವಂತಿಲ್ಲ ಎಂಬ ಅಭಿಪ್ರಾಯವನ್ನು ದೇಜಗೌ ಅವರು ವ್ಯಕ್ತಪಡಿಸುತ್ತಾರೆ. ಹಾಗೆಯೇ ಬಸವಣ್ಣ–ಅಂಬೇಡ್ಕರರ ಕಾಲ, ಸ್ಥಳ, ಪ್ರಾದೇಶಿಕ ಭಿನ್ನತೆ, ಭಾಷೆ, ಸಾಮಾಜಿಕ ಪರಿಸ್ಥಿತಿ ಎಲ್ಲದರಲ್ಲಿಯೂ ಎಷ್ಟು ಅಂತರವಿತ್ತು ಎಂಬುದನ್ನು ಹೀಗೆ ವಿವರಿಸುತ್ತಾರೆ. "ಬಸವಣ್ಣನವರು ಹನ್ನೆರಡನೆಯ ಶತಮಾನದ ಪೂರ್ವಭಾಗದಲ್ಲಿ ಕರ್ನಾಟಕದಲ್ಲಿ ಜನ್ಮವೆತ್ತಿದ್ದಾದರೆ, ಬಾಬಾ ಸಾಹೇಬ್ ಭೀಮರಾವ್ ರಾಮ್‌ಜೀ ಅಂಬೇಡ್ಕರ್ ಜನ್ಮಧಾರಣೆ ಮಾಡಿದ್ದು ಕರ್ನಾಟಕದ ಒತ್ತಿನ ಮಹಾರಾಷ್ಟ್ರದಲ್ಲಿ, ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕದಲ್ಲಿ"[೨೦] ಈ ವಿವರಣೆಯಿಂದಲೇ ಇಬ್ಬರು ಮಹಾನ್ ವ್ಯಕ್ತಿಗಳ ಅಂತರಗಳು ತಿಳಿಯುತ್ತವೆ. ಪ್ರಪಂಚವೇ ಕಂಡರಿಯದ ಸಾಮಾಜಿಕ ಚಳುವಳಿಯಾಗಿ ಹೇಗೆ ವಚನಯುಗ ಗುರುತಿಸಿಕೊಮಡಿದೆಯೋ ಹಾಗೆಯೇ "ಕಳೆದ ಐದು ಸಾವಿರ ವರ್ಷಗಳಲ್ಲಿ ಜಗತ್ತು ಕಂಡರಿಯದ, ಕನಸಿನಲ್ಲಿಯೂ ಕಾಣದ ಪವಾಡ ಸದೃಶವಾದ ಪ್ರಗತಿ ಹತ್ತೊಂಬತ್ತನೆಯ ಶತಮಾನದ ಐವತ್ತು–ಅರವತ್ತು ವರ್ಷಗಳಲ್ಲಿ ಸಿದ್ಧಿಸುತ್ತದೆ"[೨೧] ಹೋರಾಟದ, ಸಾಧನೆಯ, ಸುಧಾರಣೆಯ

ವಿಷಯದಲ್ಲಿ ಬಸವಣ್ಣ–ಅಂಬೇಡ್ಕರರಿಬ್ಬರು ಸಮಾನತೆ ಕಾಯ್ದುಕೊಂಡಿದ್ದಾರೆ ಎಂಬ ಅಂಶವನ್ನು ದೇಜಗೌ ಗುರುತಿಸಿದ್ದಾರೆ. ಸ್ವಾತಂತ್ರ್ಯ ಹೋರಾಟಕ್ಕಾಗಿ ಏಕತೆ ಪ್ರದರ್ಶಿಸಿದ ಭಾರತೀಯರು ಸ್ವಾತಂತ್ರ್ಯ ಪಡೆದ ನಂತರ ಜಾತೀಯತೆಯ ಹೆಸರಿನಲ್ಲಿ, ದೃಷ್ಟಿಯಲ್ಲಿ ಅಸಮಾನತೆ ಪ್ರದರ್ಶಿಸುತ್ತಿರುವುದು ದುರ್ದೈವದ ಸಂಗತಿಯೇ ಎಂದು ದೇಜಗೌ ಅವರು ಆತಂಕಪಡುತ್ತಾರೆ.

ಬಸವಣ್ಣ–ಅಂಬೇಡ್ಕರರ ಹುಟ್ಟಿನಲ್ಲಿಯೇ ಬಹಳ ವಿರುದ್ಧವಾದ ವ್ಯತ್ಯಾಸವನ್ನು ಗುರುತಿಸಿದ್ದಾರೆ. ಉಗ್ರ ಸಂಪ್ರದಾಯಸ್ಥ ಶೈವ ಬ್ರಾಹ್ಮಣ ಕುಟುಂಬದಲ್ಲಿ ಬಸವಣ್ಣ ಜನಿಸಿದರೆ, ಅತ್ಯಂತ ಕೀಳೆನಿಸಿದ ಮಹರ್ ಜಾತಿಯಲ್ಲಿ ಅಂಬೇಡ್ಕರ್ ಜನಿಸುತ್ತಾರೆ. ಬಸವಣ್ಣನವರು ತಾವು ನಂಬಿದ್ದ ತತ್ವದ ಪರಿಪಾಲನೆಗಾಗಿ ಕುಟುಂಬವನ್ನೇ ತ್ಯಜಿಸಿದವರು. ಇಡೀ ಊರೇ ಇವರ ನಡವಳಿಕೆಯನ್ನು ತಿರಸ್ಕರಿಸಿದರೂ ಎದೆಗುಂದದೆ ಮುನ್ನಡೆದವರು. ಇವರ ಮನದ ಇಂಗಿತವನ್ನರಿತವರು ಅವರ ಸೋದರಿ ನಾಗಮ್ಮ.

ಅಂಬೇಡ್ಕರ್ ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯ ಅಂಬಾವಾಡೆಯಲ್ಲಿ ಜನಿಸಿದರು. ತಂದೆ ರಾಮ್‌ಜಿಸಕ್ಪಾಲ್, ತಾಯಿ ಭೀಮಾಬಾಯಿ, ೧೪ನೆಯ ಮಗನಾಗಿ ಜನಿಸಿದ ಅಂಬೇಡ್ಕರರಿಗೆ ಪ್ರಾಥಮಿಕ ಶಿಕ್ಷಣ ಪಡೆಯಲು ಶಾಲೆ ಸೇರಿದಾಗಲೇ ಜಾತಿಯ ಶೋಷಣೆ, ಅವಮಾನದ ಅರಿವಾಗುತ್ತದೆ. ಆದರೆ ಅವರಲ್ಲಿದ್ದ ಆತ್ಮವಿಶ್ವಾಸ, ಅಸಾಧಾರಣ ಪ್ರತಿಭೆ ಅವರನ್ನು ಮುನ್ನುಗ್ಗಲು ಪ್ರೇರೇಪಿಸುತ್ತದೆ. ಅಂದು ಆ ಅವಮಾನಕ್ಕೆ ಹೆದರಿದ್ದರೆ ಇಂದು ವಿಶ್ವಕಂಡ ಹೋರಾಟಗಾರರಲ್ಲಿ ಪ್ರಥಮಸ್ಥಾನದಲ್ಲಿ ನಿಲ್ಲಲು ಸಾಧ್ಯವಾಗುತ್ತಿರಲಿಲ್ಲ. "ಈ ದೇಶದ ಧಾರ್ಮಿಕ ವ್ಯವಸ್ಥೆ ಮತ್ತು ಸಾಮಾಜಿಕ ವ್ಯವಸ್ಥೆಯಿಂದ ನಲುಗುತ್ತಾ ಬಂದ ಶೋಷಿತರನ್ನು ರಕ್ಷಿಸಲು ಅಂಬೇಡ್ಕರ್‌ರವರು ಮಾಡಿದ ಚಳುವಳಿಗಳೂ ವಿಶ್ವದ ಗಮನವನ್ನು ಸೆಳೆದಿದೆ"[೨೨] ಲೇಖಕರ ಈ ಅಭಿಪ್ರಾಯವು ದೀನದಲಿತರ ನೋವಿನ ದನಿಯಾಗಿ ಅಂಬೇಡ್ಕರರು ಜನಿಸಿದರೇನೋ ಎಂಬ ಮಾತಿಗೆ ಪೂರಕವಾಗಿದೆ. ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದರಿಂದ ಅಂಬೇಡ್ಕರರಿಗೆ ವಿದ್ಯಾರ್ಥಿ ವೇತನ ದೊರೆಯಲಾಗಿ ವಿದೇಶಗಳಲ್ಲಿ ವ್ಯಾಸಂಗ ಮಾಡುವ ಅವಕಾಶ ಲಭಿಸಲು ಯಶಸ್ವಿಯಾಗಿ ವಿದ್ಯಾಭ್ಯಾಸ ಮುಗಿಸಿದ ಅಂಬೇಡ್ಕರರು ಭಾರತಕ್ಕೆ ಮರಳಿದ ಮೇಲೆ ಇಡೀ ತಮ್ಮ ಜೀವಿತಾವಧಿಯನ್ನು ಹೋರಾಟಕ್ಕೆ ಮುಡಿಪಾಗಿಡುತ್ತಾರೆ.

ಆಧ್ಯಾತ್ಮಿಕ ಒಲವು, ಪ್ರಭಾವ ಬಸವಣ್ಣ–ಅಂಬೇಡ್ಕರರಲ್ಲಿ ಬಾಲ್ಯದಲ್ಲಿಯೇ ಹೇಗಿತ್ತು ಎಂಬುದರ ಬಗ್ಗೆ ದೇಜಗೌ ಅವರು ಕೆಲವು ಮುಖ್ಯ ಅಂಶಗಳ ಮೂಲಕ ತಿಳಿಸಿಕೊಡುತ್ತಾರೆ. ಬಸವಣ್ಣನವರಿಗೆ ಮಾತು ಬರುವ ಮುಂಚೆಯೇ ವೇದ

ಉಪನಿಷತ್ತುಗಳು, ಪುರಾಣ ಪ್ರವಚನಗಳು, ಶ್ಲೋಕಗಳು ಕಿವಿಗೆ ಬೀಳುತ್ತವೆ. ಹಾಗೆಯೇ ಅಂಬೇಡ್ಕರರಿಗೆ ದೈವಭಕ್ತರಾಗಿದ್ದ ಅವರ ತಂದೆ ಹೇಳುತ್ತಿದ್ದ ಕಬೀರ, ತುಕಾರಾಮರ ಭಕ್ತಿಗೀತೆಗಳು, ಭಜನೆಗಳು ಅವರಲ್ಲಿ ಧಾರ್ಮಿಕ ಪ್ರಜ್ಞೆ ಬೇರೂರಲು ಕಾರಣವಾಗುತ್ತವೆ. ಆದರೆ ಅಂಬೇಡ್ಕರರಲ್ಲಿದ್ದ ಧಾರ್ಮಿಕ ವಿಷಯಗಳು ವ್ಯಕ್ತವಾಗುವುದಿಲ್ಲ ಎಂಬ ವಿಚಾರವನ್ನು ದೇಜಗೌ ಅವರು ತಿಳಿಸಿಕೊಟ್ಟಿದ್ದಾರೆ. ಶಿವಭಕ್ತರು, ಆಧ್ಯಾತ್ಮ ಸಾಧಕರು ಆದ ಬಸವಣ್ಣನವರು ಸದಾ ಪರರ ಯೋಗಕ್ಷೇಮಕ್ಕಾಗಿ ಚಿಂತಿಸುವವರಾಗಿದ್ದರು.

ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಮಯ್ಯ
ಪಶುವೇನಬಲ್ಲುದು ಹಸುರೆಂದೆಳಸುವುದು
ವಿಷಯರಹಿತನಮಾಡಿ, ಭಕ್ತಿರಸವ ದಣಿಯೆ ಮೇಯಿಸಿ
ಸುಬುದ್ಧಿಯೆಂಬ ಉದಕವನೆರೆದು
ನೋಡಿ ಸಲಹಯ್ಯಾ ಕೂಡಲ ಸಂಗಮದೇವಾ[೨೩]

ಕೂಡಲ ಸಂಗಮದಲ್ಲಿ ಜಾತವೇದಮುನಿಗಳ ಮಾರ್ಗದರ್ಶನದಲ್ಲಿ ಅವರು ಅದ್ವೈತ ಸಿದ್ದಿಯನ್ನು ಪಡೆಯಲಾಗಿ ಮತ್ತಷ್ಟು ಅವರ ಆಧ್ಯಾತ್ಮಿಕ ಅರಿವು ಹೆಚ್ಚಾಗುತ್ತದೆ. ಪರರಿಗಾಗಿ ಸದಾ ಹಾತೊರೆಯುತ್ತಿದ್ದ ಬಸವಣ್ಣನವರ ಮನದಾಳದ ಮಾತು ಈ ವಚನದಲ್ಲಿ ವ್ಯಕ್ತವಾಗಿದೆ.



ಬುದ್ಧ ಸಂಸಾರ ಪರಿತ್ಯಾಗಿಯಾಗಿ ಸಾಧನೆ ಮಾಡಲು ಹೊರಟರೆ ಬಸವಣ್ಣ ಅಂಬೇಡ್ಕರರು ಸಂಸಾರದಲ್ಲಿದ್ದುಕೊಂಡೆ ಹೋರಾಟಕ್ಕಿಳಿದವರು, ಸಾಧನೆ ಮಾಡಿದವರು. ಜಾತವೇದ ಮುನಿಗಳ ಮಾರ್ಗದರ್ಶನದಂತೆ ಬಲದೇವರಸನ ಮಗಳು ನಾಗಲಾಂಬಿಕೆಯನ್ನು ಬಸವಣ್ಣ ವಿವಾಹ ಮಾಡಿಕೊಳ್ಳುತ್ತಾರೆ. ಸಂಸಾರವೆಂಬ ಬಂಧನದಲ್ಲಿ ಸಿಲುಕಬಾರದು ಎಂದು ಬಯಸಿದ್ದ ಬಸವಣ್ಣನವರು "ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ, ಎನ್ನುವವನು ಕಾಯಯ್ಯಾ, ಕಾಯಯ್ಯಾ ಎಂದು ನಿನ್ನ ಬಳಿ ಬಂದೊಡೆ ನಿನಗೂ ನಾನು ಬೇಡವಾದೆನೆ, ಕೂಡಲ ಸಂಗಮ ದೇವಾ ಎಂದು ಸಂಗಯ್ಯನ ಮುಂದೆ ಒರಲಾಡುತ್ತಾರೆ"[೨೪] ವಿವಾಹದ ನಂತರ ಬಿಜ್ಜಳನ ಆಸ್ಥಾನದಲ್ಲಿ ಕರಣಿಕರಾಗಿ, ಮಂತ್ರಿಯಾಗಿ ಪ್ರಾಮಾಣಿಕ ಸೇವೆ ಸಲ್ಲಿಸುತ್ತಾ ಜನಪ್ರಿಯರಾಗುತ್ತಾರೆ. ಎರಡನೇ ಪತ್ನಿಯಾಗಿ ನೀಲಾಂಬಿಕೆಯನ್ನು ವರಿಸುತ್ತಾರೆ. ನಾಗಲಾಂಬಿಕೆ-ನೀಲಾಂಬಿಕೆಯರಿಬ್ಬರೂ ಬಸವಣ್ಣನವರ ಸಾಧನೆಗೆ ಸ್ಫೂರ್ತಿಯಾಗಿ, ಪ್ರೇರಕಶಕ್ತಿಯಾಗಿ, ಪತಿಯ ಮಹತ್ಕಾರ್ಯದಲ್ಲಿ ಕೈಜೋಡಿಸುವುದರ ಮೂಲಕ ಇಡೀ ಸ್ತ್ರೀ ಕುಲಕ್ಕೆ ಮಾದರಿಯಾಗಿದ್ದಾರೆ.

ಹಾಗೆಯೇ ಅಂಬೇಡ್ಕರರ ಸಾಧನೆಯ ಹಿಂದೆ ಅವರ ಪತ್ನಿ ರಮಾಬಾಯಿಯವರ ಪಾತ್ರವು ಅಪಾರವಾದುದು. ಪತಿಗೆ ವಿಧೇಯಳಾಗಿ, ಎದುರುಮಾತನಾಡದೆ, ಅವರ ಯಾವ ಕೆಲಸಕ್ಕೂ ಅಡ್ಡಿಬರದೆ, ಭಾರತೀಯ ಸಂಪ್ರದಾಯದಂತೆ ಆದರ್ಶ ಸತಿ ಸಾಧ್ವಿ ಮಣಿಯಾಗಿದ್ದರು ಎಂಬ ಮಾತನ್ನು ವ್ಯಕ್ತಪಡಿಸಿದ್ದಾರೆ ದೇಜಗೌ ಅವರು. ಕೇವಲ ಮಹಾನ್ ಪುರುಷರ ಸಾಧನೆಗಳನ್ನು ಉನ್ನತ ಮಟ್ಟಕ್ಕೇರಿಸುವುದರ ಜೊತೆಗೆ ಅವರ ಸಾಧನೆಯ ಹಿಂದಿರುವ ಸ್ತ್ರೀಯರ ವ್ಯಕ್ತಿತ್ವವನ್ನು ಉನ್ನತ ಮಟ್ಟಕ್ಕೇರಿಸಿರುವುದು ದೇಜಗೌ ಅವರ ಸ್ತ್ರೀಪರವಾದ ಕಾಳಜಿಯನ್ನು ತೋರಿಸುತ್ತದೆ.

ಬಸವಣ್ಣ – ಅಂಬೇಡ್ಕರರಲ್ಲಿ ಸಾಮ್ಯತೆ ಕಂಡುಬರುವ ಮತ್ತೊಂದು ವಿಚಾರವನ್ನು ಗುರುತಿಸಿದ್ದಾರೆ ದೇಜಗೌ ಅವರು. ಬಸವಣ್ಣನವರಿಗೆ ಸಂಗಮೇಶ್ವರನನ್ನು ನೆನೆಯುವಾಗಲೆಲ್ಲಾ ತಮ್ಮ ತಂದೆಯ ನೆನಪು ಬರುತ್ತಿದ್ದಿರಬಹುದು. ಅವರ ಅಪಾರಜ್ಞಾನಕ್ಕೆ ತಂದೆಯ ವೇದಾಂತ ಪಾರಾಯಣವೇ ಕಾರಣವಾಗಿತ್ತು. ಅವರ ನೋವು–ನಲಿವು, ಸೋಲು–ಗೆಲುವುಗಳಲ್ಲಿ ಸೋದರಿ ನಾಗಲಾಂಬಿಕೆಯ ಸಹಕಾರ, ಜಾತವೇದಮುನಿಯ ಸಾನ್ನಿಧ್ಯ, ಗುರು ಪ್ರಭುದೇವರ ಮಾರ್ಗದರ್ಶನ, ಆಶೀರ್ವಾದ ಬಸವಣ್ಣನವರ ಸಾಧನೆಗೆ ಸ್ಫೂರ್ತಿಯಾಗಿದ್ದ, ಪ್ರೇರಕವಾಗಿದ್ದ ಅಂಶಗಳು.

ಹಾಗೆಯೇ ಅಂಬೇಡ್ಕರರ ಜೀವನದಲ್ಲಿಯೂ ಅವರ ತಂದೆಯ ಉಪದೇಶಗಳು, ಅವರ ಅಕ್ಕ ಹಾಡುತ್ತಿದ್ದ ಅಭ್ಯಂಗಗಳು ಅವರಲ್ಲಿ ನೈತಿಕ ಸ್ಥೈರ್ಯ, ಆತ್ಮವಿಶ್ವಾಸವನ್ನು ತುಂಬಿವೆ. ಅಂಬೇಡ್ಕರರು ಮಹಾನ್ ಸಮಾಜ ಸುಧಾರಕರಾದ ಜ್ಯೋತಿ ಬಾಪುಲೆಯವರನ್ನು ತಮ್ಮ ಪರೋಕ್ಷ ಗುರುವೆಂದೆ ಬಗೆಯುತ್ತಾರೆ. ಅವರೇ ಹೇಳುವಂತೆ ಪುಸ್ತಕಗಳನ್ನು ಓದುವ ಹವ್ಯಾಸಕ್ಕೆ ಬೆಂಬಲವಾಗಿ ನಿಂತಿದ್ದವರೇ ಅವರ ತಂದೆ. "ಮರಾಠಿ ಸಂತ ಸಾಹಿತ್ಯವನ್ನು ನನ್ನಂತೆ ಆಳವಾಗಿ ಅಭ್ಯಾಸ ಮಾಡಿದವರು ತೀರ ವಿರಳ. ಇಂಗ್ಲಿಷ್ ಮತ್ತು ಮರಾಠಿ ಭಾಷೆಗಳ ಮೇಲಣ ತಮ್ಮ ಪ್ರಭುತ್ವಕ್ಕೆ ತಮ್ಮ ತಂದೆಯೇ ಕಾರಣರೆಂದು ಕೃತಜ್ಞತೆಯಿಂದ ನೆನೆಯುತ್ತಾರೆ"[೨೫] ದೇಜಗೌ ಅವರು ತಿಳಿಸಿರುವ ಈ ಎಲ್ಲಾ ವಿಚಾರಗಳಿಂದ ಬಸವಣ್ಣ–ಅಂಬೇಡ್ಕರರ ಕೌಟುಂಬಿಕ ವಾತಾವರಣ, ಗುಣಗಳಲ್ಲಿ ಇರುವ ಸಾಮ್ಯತೆಯನ್ನು ಕಂಡುಕೊಳ್ಳಬಹುದಾಗಿದೆ.

**ಸಾಮಾಜಿಕ ಚಿಂತನೆಗಳು**

ಬಸವಣ್ಣ- ಅಂಬೇಡ್ಕರರ ಸಾಮಾಜಿಕ ಪರ ಕಾಳಜಿಗಳು, ಚಿಂತನೆಗಳು ಒಂದೇ ಬಗೆಯಲ್ಲಿದ್ದವು. ಇದಕ್ಕೆ ಅನೇಕ ಘಟನೆಗಳು ಸಾಕ್ಷಿಯಾಗಿವೆ. ಬಸವಣ್ಣನವರು ಸಮಾಜವನ್ನು ದುರ್ಬಲಗೊಳಿಸುವ ಪುರಾಣಗ್ರಂಥಗಳನ್ನು ಸಂಪೂರ್ಣವಾಗಿ ನಾಶ ಮಾಡಿದಾಗ ಮಾತ್ರ ಸಮಾಜಕ್ಕೆ ಶ್ರೇಯಸ್ಸು ಸಾಧ್ಯ ಎಂದು ಸಾರಿದ ಇವರು

"ವೇದಕ್ಕೆ ಓಜೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ
ತರ್ಕದ ಬೆನ್ನ ಬಾರನೆತ್ತುವೆ, ಆಗಮದ ಮೂಗ ಕೊಯಿವೆ"[೨೬]

ಎಂದು ಆಕ್ರೋಶ ವ್ಯಕ್ತಪಡಿಸುತ್ತಾರೆ. ಇಡೀ ವೈದಿಕ ಸಾಹಿತ್ಯವನ್ನು ಪ್ರಶ್ನಿಸಿದ್ದಾರೆ. ಹಾಗೆಯೇ ಮುಂದುವರೆದು

ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸುತ್ತಿದೆ
ವೇದ ಘನವೆಂಬೆನೆ? ಪ್ರಾಣಿವಧೆಯ ಹೇಳುತ್ತಿದೆ
ಶ್ರುತಿ ಘನವೆಂಬೆನೆ? ಮುಂದಿಟ್ಟರಸುತ್ತಿದೆ
ಅಲ್ಲೆಲ್ಲಿಯೂ ನೀವಿಲ್ಲದ ಕಾರಣ
ತ್ರಿವಿಧ ದಾಸೋಹದಲ್ಲಲ್ಲದೆ ಕಾಣಬಾರದು ಕೂಡಲ ಸಂಗಮದೇವನ[೨೭]

ವೇದ, ಉಪನಿಷತ್ತುಗಳನ್ನು ವಿಚಾರಮಾಡದೆ ನಂಬುವ ಅಗತ್ಯವಿಲ್ಲ ಎಂದು ಬಸವಣ್ಣನವರು ಕರೆ ನೀಡುತ್ತಾರೆ. ಇದೆಲ್ಲದರಿಂದ ಪ್ರೇರೇಪಿತರಾದಂತೆ ಅಂಬೇಡ್ಕರರು "ಭರತಖಂಡದ ಸರ್ವಾವನತಿಗೆ ಮನುಸ್ಮೃತಿಯೇ ಸರ್ವಕಾರಣವೆಂದು ಬಗೆದದ್ದಲ್ಲದೆ, ಅದೊಂದು ದುಷ್ಟಗ್ರಹದ ಹಾಗೂ ಮಹಾ ಪಿಡುಗಿನ ಸಂಕೇತವೆಂದು ನುಡಿಸುತ್ತಾರೆ"[೨೮]

ಏನಿಬಂದಿರಿ, ಹದುಳವಿದ್ದಿರೆ ಎಂದಡೆ
ನಿಮ್ಮ ಮೈಸಿರಿ ಹಾರಿಹೋಹುದೆ?
ಕುಳ್ಳಿರೆಂದಡೆ ನೆಲ ಕುಳಿಹೋಹುದೆ?
ಒಡನೆ ನುಡಿದಡೆ ಸಿರಹೊಟ್ಟೆಯೊಡೆವುದೆ?[೨೯]

ಬಸವಣ್ಣನವರ ಈ ವಚನವು ನೆರೆಹೊರೆಯವರ ಜೊತೆ ಒಡನಾಟ ಹೇಗಿರಬೇಕೆಂಬುದರ ಬಗ್ಗೆ ತಿಳಿಸಿರುವಂತಿದೆ. ಮೇಲ್ವರ್ಗದವರು ಆಗಿನ ಸಮಾಜದಲ್ಲಿ ಮಾತ್ರವಲ್ಲ ಈಗಿನ ಪರಿಸ್ಥಿತಿಯಲ್ಲಿಯೂ ಕೆಳವರ್ಗದವರನ್ನು ಮಾತನಾಡಿಸಲು ಹಿಂಜರಿಯುತ್ತಾರೆ. ಅಂತಹವರಿಗೆ ಈ ವಚನ ಬುದ್ಧಿಮಾತಿನಂತಿದೆ.

ರಾಷ್ಟ್ರಪಿತ ಗಾಂಧೀಜಿಯವರು ದಲಿತನಾಗಿ ಹುಟ್ಟುವ ಆಶಯವನ್ನು ವ್ಯಕ್ತಪಡಿಸುತ್ತಿದ್ದರು. ಇದು ಮಹಾತ್ಮರಿಗೆ ಮಾತ್ರ ಸಾಧ್ಯ. ನಡೆ-ನುಡಿಗಳಲ್ಲಿ ಬಸವಣ್ಣನವರ ತತ್ವಗಳು ಕಂಡುಬರುತ್ತಿದ್ದವು. ಪರೋಕ್ಷವಾಗಿ ಅಂಬೇಡ್ಕರರು ಗಾಂಧೀಜಿಯವರ ಪ್ರಭಾವಕ್ಕೊಳಗಾಗಿದ್ದರು. ಅಹಿಂಸೆ, ಸರಳತೆ ಗಾಂಧೀಜಿಯವರ ತತ್ವಗಳಾಗಿದ್ದವು. ಗಾಂಧೀಜಿ ದಲಿತ ವಿರೋಧಿಯಾಗಿರಲಿಲ್ಲ. ಮೊದಲು ಅವರಿಗೆ ಇಡೀ ಭಾರತ ಸಂಪೂರ್ಣ ಸ್ವಾತಂತ್ರ್ಯ ಪಡೆಯುವುದಾಗಿತ್ತು. ಅಂಬೇಡ್ಕರರಿಗೆ ದೇಶದ ಸ್ವಾತಂತ್ರ್ಯ ಜೊತೆಗೆ ದೇಶದೊಳಗಿರುವ ದಲಿತರಿಗೂ ಸ್ವಾತಂತ್ರ್ಯ ಬೇಕಿತ್ತು. ೧೨ನೆಯ ಶತಮಾನದಲ್ಲಿಯೇ ಬಸವಣ್ಣನವರು ಒಂದು ರಾಜ್ಯ ಆಗಲಿ ದೇಶವಾಗಲಿ ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಕ್ರಾಂತಿಯಾಗದೆ ರಾಜಕೀಯ ಕ್ಷೇತ್ರದಲ್ಲಿ ಕ್ರಾಂತಿಯಾಗದು ಎಂದು ಅಭಿಪ್ರಾಯಪಡುತ್ತಾರೆ. ದೇಜಗೌ ಅವರು ಮತ್ತೊಂದು ವಿಷಯವನ್ನು ಸ್ಪಷ್ಟಪಡಿಸಿದ್ದಾರೆ. "ಸಾಮಾಜಿಕ ಸ್ವಾತಂತ್ರ್ಯ ಚಳುವಳಿಯನ್ನು ನಡೆಸಿದವರಲ್ಲಿ ಅಂಬೇಡ್ಕರ್ ಮೊದಲಿಗರಲ್ಲ. ಆದರೆ ದೃಢಹಠದಿಂದ, ಭೀಮಧೈರ್ಯದಿಂದ, ಪ್ರವಾದಿಯ ದೃಷ್ಟಿಯಿಂದ ಪಾದ್ರಿಯ ಶ್ರದ್ಧೆಯಿಂದ ಪರಿಣಾಮಕಾರಿಯಾಗಿ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದ ಏಕೈಕ ವ್ಯಕ್ತಿ ಅಂಬೇಡ್ಕರ್"[೬೦] ಹಾಗೆಯೇ ಬಸವಣ್ಣನವರ ಬಗ್ಗೆಯೂ "ಅಂತರಂಗಶುದ್ಧಿ ಬಹಿರಂಗಶುದ್ಧಿಗಳೆರಡೂ ಮೇಳವಿಸಿದ ಪವಿತ್ರ ಜೀವನದಿಂದ, ದೀನದಲಿತ ಲೋಕೋದ್ಧಾರಪರವಾದ ಸಾಧನೆ ಸಿದ್ಧಿಗಳಿಂದ, ಇಪ್ಪತ್ತನೆಯ ಶತಮಾನದ ಕಲ್ಪನೆಗೂ ಮೀರಿದ ಅಸ್ಪೃಶ್ಯತಾ ನಿರ್ಮೂಲನ, ಜಾತಿವಿನಾಶ, ಸ್ತ್ರೀ ಸ್ವಾತಂತ್ರ್ಯ, ವೃತ್ತಿಗೌರವ, ವರ್ಗೋತ್ಪಾಟನಾಪರವಾದ ಸಮಗ್ರ ಕ್ರಾಂತಿಯ ಚಾಲನೆಯಿಂದ ಲೋಕಕ್ಷೇಮವನ್ನೇ ಗುರಿಯಾಗಿಟ್ಟುಕೊಂಡು ಭೂಮಿಯಲ್ಲಿಯೇ ಸ್ವರ್ಗವನ್ನು ಸಂಸ್ಥಾಪಿಸುವ ಛಲದಿಂದ ಸಮರ್ಪಣ ಮನೋಭಾವದಿಂದ ತಮ್ಮ ಜೀವನ ಸವೆಸಲಾಗಿ ಅಂದಿಂದು ಮುಂದುಗಳ ಜನ ಹೃದಯ ಪೀಠದಲ್ಲಿ ಅವರು ವಿರಾಜಮಾನರಾಗಿದ್ದಾರೆ".[೬೧] ಈ ಎರಡು ಅಭಿಪ್ರಾಯಗಳಿಂದಲೇ ಬಸವಣ್ಣ-ಅಂಬೇಡ್ಕರ್ ಇಬ್ಬರ ವ್ಯಕ್ತಿತ್ವಗಳು ಪರಿಚಯವಾಗುತ್ತವೆ.

ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ
ಜಲವೊಂದೆ ಶೌಚಾಚಮನಕ್ಕೆ
ಕುಲವೊಂದೆ ತನ್ನ ತಾನಱಿದವಂಗೆ
ಫಲವೊಂದೆ ಷಡುದರುಶನ ಮುಕ್ತಿಗೆ
ನಿಲವೊಂದೆ, ಕೂಡಲ ಸಂಗಮದೇವಾ, ನಿಮ್ಮನಱಿದವಂಗೆ[೬೨]

ಇಂಥ ನೈಜವಾದ ಅದ್ಭುತ ರಚನೆ ಪ್ರಪಂಚದ ಯಾವ ಸಂತನಲ್ಲಿಯೂ ಕಾಣಲು ಸಾಧ್ಯವಿಲ್ಲ. ಬಹುಶಃ ಅಂಬೇಡ್ಕರರಿಗೆ ವಚನಗಳ ಪರಿಚಯವಿದ್ದುದಾದರೆ ಬಸವಣ್ಣನ ಆರಾಧಕರಾಗುತ್ತಿದ್ದರೇನೋ ಎಂಬ ಅಭಿಪ್ರಾಯವನ್ನು ದೇಜಗೌ ವ್ಯಕ್ತಪಡಿಸಿದ್ದಾರೆ. ಬಸವಣ್ಣನವರು ವಚನಗಳ ರಚನೆಯ ಮೂಲಕ ಸಾಮಾಜಿಕ ಸಮಸ್ಯೆಗಳನ್ನು ವಿರೋಧಿಸುತ್ತಿದ್ದರೆ ಅಂಬೇಡ್ಕರರು ವೈಜ್ಞಾನಿಕವಾಗಿ, ವಿಶ್ಲೇಷಣಾತ್ಮಕವಾಗಿ ಲೇಖನಗಳನ್ನು ಬರೆಯುತ್ತಿದ್ದರು. ಜಾತೀಯತೆ, ಅಜ್ಞಾನ, ಮೂಢನಂಬಿಕೆಗಳ ಬಗ್ಗೆ ಚಿಂತಿಸುತ್ತಿದ್ದ ಈ ಇಬ್ಬರು ಮಹನೀಯರು ನೈರ್ಮಲ್ಯ, ವೈಚಾರಿಕತೆಯ ಬಗ್ಗೆಯೂ ಅರಿವು ಮೂಡಿಸಿದರು. ಮನುಷ್ಯನಿಗೆ ಮಾನಸಿಕ ಆರೋಗ್ಯದಂತೆ ಬಾಹ್ಯ ಶುದ್ಧವೂ ಮುಖ್ಯ. ಶುದ್ಧತೆ ಮುಖ್ಯ. ಅಂದು ಹೆಚ್ಚು ಕಾಣಿಸಿಕೊಳ್ಳುತ್ತಿದ್ದ ಮಲೇರಿಯಾ, ಪ್ಲೇಗ್‌ಗಳಂತಹ ಮಾರಣಾಂತಿಕ ಕಾಯಿಲೆಗಳಿಗೆ ಸರಿಯಾದ ಔಷಧೋಪಚಾರ ಮುಖ್ಯ ಎಂದು ಹೇಳಿದರು. ಮೂಢನಂಬಿಕೆಗಳು ದೂರವಾಗದ ಹೊರತು ಸಾಮಾಜಿಕ ಕಲ್ಯಾಣ ಅಸಾಧ್ಯ ಎಂದು ನಂಬಿದ್ದರು.

ಪ್ರತಿಭೆ, ಪಾಂಡಿತ್ಯವೆಂಬ ಉತ್ತಮ ಗುಣಗಳು ವಂಶವಾಹಿನಿಯಿಂದ ಹರಿದು ಬಂದಿರುತ್ತವೆ. ಉತ್ತಮ ಕುಲದಲ್ಲಿ ಹುಟ್ಟಿದವರು ಮಾತ್ರ ಉನ್ನತ ಸ್ಥಾನಕ್ಕೆ ತಲುಪಬಲ್ಲರು ಎಂಬ ವಾದ ಪುರೋಹಿತಶಾಹಿ ವರ್ಗದವರದ್ದು. ಅದಕ್ಕೆ ಬಸವಣ್ಣನವರು ಸರಿಯಾದ ಉತ್ತರಕೊಡುತ್ತಾರೆ.

> "ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ,
> ಮಂಡೋದರಿ ಕಪ್ಪೆಯ ಮಗಳು।
> ಕುಲವನಱಸದಿರಿಂ ಭೋ ಕುಲದಿಂದ ಮುನ್ನೇನಾದಿರಿಂ ಭೋ?
> ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದುರ್ವಾಸ ಮುಚ್ಚಿಗ, ಕಶ್ಯಪ ಕಮ್ಮಾರ,
> ಕೌಂಡಿನ್ಯನೆಂಬ ಋಷಿ ಮೂಱುಭುವನವಱಿಯೆ ನಾವಿದ, ಕಾಣಿ ಭೋ
> ನಮ್ಮ ಕೂಡಲ ಸಂಗನ ವಚನವಿಂತೆಂದುದು
> ಶ್ವಪಚೋಪಿಯಾದಡೇನು, ಶಿವಭಕ್ತನೆ ಕುಲಜಂ ಭೋ"[೩೩]

ಇವರಿಗೆಲ್ಲ ಜಾತಿಯ ವಿಷಯದಲ್ಲಿ ಕೆಳವರ್ಗದ ಹಿನ್ನೆಲೆಯಿದ್ದರೂ ತಮ್ಮ ಕೃತಿ, ಧ್ಯಾನ, ಸಾಧನೆಗಳಿಂದ, ಕಾರ್ಯಗಳಿಂದ ಚಿರಂಜೀವಿಗಳಾಗಲಿಲ್ಲವೇ ಎಂಬ ಪ್ರಶ್ನೆಯನ್ನು ಮುಂದಿಡುತ್ತಾರೆ. ಚಾತುರ್ವರ್ಣ ಪದ್ಧತಿ ಸಂಪೂರ್ಣ ನಾಶವಾಗುವ ತನಕ ಹಿಂದೂ ಸಮಾಜದ ಸಂಘಟನೆಯಾಗಲು ಸಾಧ್ಯವಿಲ್ಲ ಎಂಬ ವಾದ ಬಸವಣ್ಣ – ಅಂಬೇಡ್ಕರರದು.

ಭಾರತದಲ್ಲಿ ಜಾತಿವ್ಯವಸ್ಥೆ ನಿರ್ನಾಮವಾಗುವುದರ ಜೊತೆಗೆ ಅವುಗಳ ಜೊತೆ ಬಂದಿರುವ ಹೆಸರುಗಳು ನಾಶವಾಗಬೇಕೆಂದು ಬಯಸಿದ ಆಶಯವು ಬಸವಣ್ಣನವರ ಈ ವಚನದೊಂದಿಗೆ ಮಿಳಿತವಾಗಿದೆ.

ಸೆಟ್ಟಿಯೆಂಬೆನೆ ಸಿರಿಯಾಳನ?
ಮಡಿವಾಳನೆಂಬೆನೆ ಮಾಚಯ್ಯನ?
ಡೋಹರನೆಂಬೆನೆ ಕಕ್ಕಯ್ಯನ?
ಮಾದಾರನೆಂಬೆನೆ ಚನ್ನಯ್ಯನ?
ಆನು ಹಾರುವನೆಂದಡೆ ಕೂಡಲ ಸಂಗಯ್ಯ ನಗುವನಯ್ಯ[೩೪]

ಶರಣರಾಗಬೇಕೆಂಬುದು ಬಸವಣ್ಣನವರ ಬಯಕೆ. ಲಿಂಗಧಾರಣೆಯ ಮೂಲಕ ಕೆಳವರ್ಗದ ವ್ಯಕ್ತಿಯನ್ನು ಶರಣನನ್ನಾಗಿಸಿದರು. ಸಮಾನತೆ ತರುವ ನಿಟ್ಟಿನಿಂದ ಬಸವಣ್ಣನವರು ತಂದ ಮತ್ತೊಂದು ಕಾರ್ಯವೆಂದರೆ ಅಂತರ್ಜಾತಿ ವಿವಾಹ. ಈ ವಿವಾಹಗಳನ್ನು ನೆರವೇರಿಸಿ ಯಶಸ್ವಿಯೂ ಆದರು. ಇಲ್ಲಿಯೂ ಕೂಡ ಅಂಬೇಡ್ಕರರು ಬಸವಣ್ಣನವರನ್ನೇ ಅನುಸರಿಸಿದ್ದಾರೆ. ಸ್ವತಃ ಅಂಬೇಡ್ಕರರೇ ವಿಧುರರಾದ ಬಳಿಕ ಬ್ರಾಹ್ಮಣ ಸ್ತ್ರೀಯನ್ನು ಮದುವೆಯಾಗುವ ಮೂಲಕ ಬಸವಣ್ಣನವರ ನೀತಿಯನ್ನು ಪಾಲಿಸಿದ್ದಾರೆ.

ದಾಸ್ಯ ವಿಮೋಚನೆ ಇಬ್ಬರ ಉದ್ದೇಶವಾಗಿದ್ದುದರಿಂದ ಸ್ತ್ರೀ–ಪುರುಷರಿಬ್ಬರೂ ಸಮಾಜದ ಕಣ್ಣುಗಳು. ಇಬ್ಬರೂ ಮುಖ್ಯ ೧೨ನೆಯ ಶತಮಾನದಲ್ಲಿಯೇ ಸ್ತ್ರೀ ಸ್ವಾತಂತ್ರ್ಯಕ್ಕೆ ಕರೆಕೊಟ್ಟ ಬಸವಣ್ಣ ಎತ್ತರದ ಸ್ಥಾನದಲ್ಲಿ ನಿಲ್ಲುತ್ತಾರೆ. ಸ್ತ್ರೀಯರು ಎಲ್ಲಾ ಕ್ಷೇತ್ರದಲ್ಲಿಯೂ ಮುಂಚೂಣಿಯಲ್ಲಿದ್ದರೆಂಬುದಕ್ಕೆ ಮುಕ್ತಾಯಕ್ಕ, ಅಕ್ಕಮಹಾದೇವಿ, ಲಿಂಗಮ್ಮ, ಆಯ್ದಕ್ಕಿ ಲಕ್ಕಮ್ಮ ಮೊದಲಾದ ವಚನಕಾರ್ತಿಯರೇ ಸಾಕ್ಷಿಯಾಗಿದ್ದಾರೆ. ಬಸವಣ್ಣನವರು "ಸ್ತ್ರೀ ಸ್ವಾತಂತ್ರ್ಯವಿಲ್ಲದ ಸಮಾಜದಲ್ಲಿ ಸಮಾಜವಾದವಾಗಲಿ, ಪ್ರಜಾಪ್ರಭುತ್ವವಾಗಲಿ ಭದ್ರವಾಗಿ ಬೇರೂರಲಾರದು"[೩೫] ಎಂಬ ವಿಚಾರವನ್ನು ಸಮಾಜಕ್ಕೆ ತಿಳಿಸಿಕೊಡುತ್ತಾರೆ.

ಪ್ರಜಾಪ್ರಭುತ್ವದ ಹಿನ್ನೆಲೆಯಲ್ಲಿ ಸ್ತ್ರೀಗೂ ಸಮಾನತೆ ಬೇಕೆಂಬುದು ಅಂಬೇಡ್ಕರರ ಅಭಿಪ್ರಾಯ. ಬಸವಣ್ಣನವರ ಅಭಿಪ್ರಾಯವನ್ನೇ ಒಪ್ಪಿದಂತೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. "ಸ್ತ್ರೀಯರು ನಿರ್ಭಯರಾಗಿ, ಧೈರ್ಯೋತ್ಸಾಹದಿಂದ, ಸಾಹಸಪ್ರಿಯರಾಗಿ, ಪುರುಷರೊಡನೆ ಸಮಾನಸ್ಕಂಧರಾಗಿ ವರ್ತಿಸಬೇಕು. ತಾವು

ಉಡುವ ಬಟ್ಟೆ ತೇಪೆಯಿಂದ ಕೂಡಿದ್ದರೂ ನಿರ್ಮಲವಾಗಿರಬೇಕು. ತಮ್ಮ ಅಭಿರುಚಿಗನುಗುಣವಾದ ವಸ್ತ್ರಾಭರಣಗಳನ್ನು ಧರಿಸುವಲ್ಲಿ ಅವರು ಸ್ವತಂತ್ರರಾಗಿರಬೇಕು"[೫೬] ಇದು ಅಂಬೇಡ್ಕರರು ಸ್ತ್ರೀಯರಿಗೆ ನೀಡಿರುವ ಸಂದೇಶ. ಸಮಾಜದ ಸರ್ವಾಂಗೀಣ ಪ್ರಗತಿಗೆ ಸ್ತ್ರೀ ಬಂಧನದಿಂದ ವಿಮುಕ್ತಳಾಗಬೇಕೆಂಬ ಕರೆಯನ್ನು ಬಸವಣ್ಣ- ಅಂಬೇಡ್ಕರರಿಬ್ಬರೂ ನೀಡಿದ್ದಾರೆ. ಈ ವಿಚಾರದಲ್ಲಿ ಅಂಬೇಡ್ಕರರು ಬುದ್ಧನನ್ನು ಅನುಸರಿಸದೆ ಬಸವಣ್ಣನವರ ತತ್ವವನ್ನೇ ಹಿಂಬಾಲಿಸಿದ್ದಾರೆ.

ಸಮಾಜವಾದವಾಗಲಿ, ಪ್ರಜಾಪ್ರಭುತ್ವವಾಗಲಿ ಒಂದು ರಾಷ್ಟ್ರದಲ್ಲಿ ಭದ್ರವಾಗಿ ಬೇರೂರಬೇಕಾದರೆ ಸ್ತ್ರೀ-ಪುರುಷರಿಬ್ಬರಿಗೂ ಸಮಾನ ಅವಕಾಶಗಳು ಸೃಷ್ಟಿಯಾಗಬೇಕೆಂಬುದು ಈ ಇಬ್ಬರು ಮಹಾನ್ ವ್ಯಕ್ತಿಗಳ ಆಶಯವಾಗಿತ್ತು. ಆದರೆ ಅದು ಇಂದಿಗೂ ನ್ಯಾಯಬದ್ಧವಾಗಿ ಈಡೇರಿಲ್ಲ.

**ಧಾರ್ಮಿಕ ಚಿಂತನೆಗಳು**

ಬಾಲ್ಯದಲ್ಲಿಯೇ ಧಾರ್ಮಿಕ ಪ್ರಜ್ಞೆಯನ್ನು ಬೆಳೆಸಿಕೊಂಡ ಬಸವಣ್ಣ- ಅಂಬೇಡ್ಕರರು ಸುಸಂಸ್ಕೃತ ಸಮಾಜದ ನಿರ್ಮಾಣದ ಕನಸು ಕಂಡಿದ್ದರು. ದಾಸ್ಯವನ್ನು ಇಬ್ಬರು ವಿರೋಧಿಸುತ್ತಿದ್ದರು. ಇಡೀ ಮನುಕುಲಕ್ಕೆ ಅನ್ವಯವಾಗುವ ಧರ್ಮದ ಅನ್ವೇಷಣೆಗೆ ಇಬ್ಬರೂ ಪ್ರಯತ್ನಿಸಿದರು.

"ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ"[೫೭]

ಪುರೋಹಿತಶಾಹಿ ವರ್ಗ ಸೃಷ್ಟಿಸಿದ್ದ ಸ್ವರ್ಗ-ನರಕದ ಕಲ್ಪನೆಯನ್ನು ಬಸವಣ್ಣನವರು ಸ್ಪಷ್ಟಪಡಿಸಿದರು. ಇರುವ ಒಂದೇ ಭೂಮಿಯಲ್ಲಿಯೇ ಸ್ವರ್ಗ- ನರಕಗಳಿವೆ. ಜೈನರಲ್ಲಿದ್ದ ಸ್ವರ್ಗ-ನರಕದ ಕಲ್ಪನೆ ವಚನಕಾರರಲ್ಲಿಲ್ಲ. ಈ ಕಲ್ಪನೆಯೇ ಮೌಢ್ಯಕ್ಕೆ ದಾರಿ ಎಂದು ಸಾರಿದರು. ಅಂಬೇಡ್ಕರರಿಗೂ ಸ್ವರ್ಗ-ನರಕದಲ್ಲಿ ನಂಬಿಕೆಯಿರಲಿಲ್ಲ. ಪೌರೋಹಿತ್ಯಕ್ಕೆ ಕೆಲವು ಕಡ್ಡಾಯ ಗುಣಲಕ್ಷಣಗಳಿರಲೇಬೇಕೆಂದು ಅಂಬೇಡ್ಕರ್ ವಾದಿಸಿದ್ದಾರೆ. ನಿಗದಿತ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು. ಸರ್ಕಾರಿ ಸೇವಾ ನಿಯಮಗಳಿಗೆ ಬದ್ಧನಾಗಿರಬೇಕು, ಪುರೋಹಿತರ ಸಂಖ್ಯೆಯನ್ನು ಸರ್ಕಾರವೇ ನಿಷ್ಕರ್ಷಿಸಬೇಕು. ಆಗಾಗ್ಗೆ ದಕ್ಷತೆಯ ಬಗ್ಗೆ ಪರೀಕ್ಷೆಗಳಾಗಬೇಕು, ನೈತಿಕತೆಯಿರದೆ ಪುರೋಹಿತನಿಗೆ ಶಿಕ್ಷೆಯಾಗಬೇಕು. ಇನ್ನೂ ಮುಂತಾದ ಲಕ್ಷಣಗಳನ್ನು

ಹೇಳುತ್ತಾರೆ. ಇವೆಲ್ಲದರಿಂದ ಜಾತಿವ್ಯವಸ್ಥೆ ನಾಶವಾಗಬಹುದು ಎಂದು ಅಭಿಪ್ರಾಯಪಡುತ್ತಾರೆ. ಇಂದು ಇದೇ ರೀತಿಯ ನಿಯಮಗಳು ರಾಜಕಾರಣಿಗಳಿಗೂ ಇರಬೇಕೆಂದು ಪ್ರಜೆಗಳು ಬಯಸುತ್ತಾರೆ. ರಾಜಕಾರಣಿಗಳ ದೌರ್ಜನ್ಯದಿಂದ ಬೇಸತ್ತ ಪ್ರಜೆಗಳು ಅರ್ಹತೆಗಳ ಆಧಾರದ ಮೇಲೆ ನಾಯಕನನ್ನು ಆಯ್ಕೆಮಾಡುವ ವ್ಯವಸ್ಥೆ ಬರಬೇಕು ಎಂದು ಹಂಬಲಿಸುತ್ತಾರೆ. ಆದರೆ ಇಂದು ಇದು ಸಾಧ್ಯವೇ ಎಂಬ ಪ್ರಶ್ನೆ ಪ್ರಜೆಗಳಲ್ಲಿಯೇ ಮೂಡುತ್ತದೆ.

ಬಸವಣ್ಣನವರಲ್ಲಿ ದೇವಾಲಯದ ಕಲ್ಪನೆಯೇ ಬೇರೆಯಾಗಿತ್ತು. ದೇವಾಲಯಗಳು ಮೌಢ್ಯ ಪ್ರಸಾರದ ಕೇಂದ್ರಗಳಾಗಿದ್ದವು ಎಂಬ ನಂಬಿಕೆಯೂ ಅವರಲ್ಲಿ ಇತ್ತು.

"ಉಳ್ಳವರು ಶಿವಾಲಯ ಮಾಡುವರು
ನಾನೇನ ಮಾಡುವೆ ಬಡವನಯ್ಯಾ
ಎನ್ನ ಕಾಲೇ ಕಂಬ, ದೇಹವೆ ದೇಗುಲ
ಶಿರವೆ ಹೊನ್ನ ಕಲಶವಯ್ಯಾ
ಕೂಡಲಸಂಗಮದೇವಾ, ಕೇಳಯ್ಯಾ
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ"[೩೮]

ದೇವಾಲಯ ನಿರ್ಮಾಣವನ್ನು ವಿರೋಧಿಸಿದ ಬಸವಣ್ಣನವರು ಪೌರೋಹಿತ್ಯವನ್ನು ವಿರೋಧಿಸಿದರು. ಹಿಂದೂಧರ್ಮದ ದೇವರಗಳನ್ನು ತಿರಸ್ಕರಿಸಬೇಕು ಎಂದು ಅಂಬೇಡ್ಕರರಂತೆ ೧೨ನೆಯ ಶತಮಾನದಲ್ಲಿಯೇ ಬಸವಣ್ಣನವರು ಕರೆಕೊಟ್ಟಿದ್ದರು. ಪುರಾಣಶಾಸ್ತ್ರಗಳನ್ನು ತಿರಸ್ಕರಿಸಿ ಹೊಸ ಸಮಾಜದ ನಿರ್ಮಾಣಕ್ಕೆ ಕರೆಕೊಟ್ಟರೆಂಬ ವಿಚಾರವನ್ನು ದೇಜಗೌ ಅವರು ಅನೇಕ ಉದಾಹರಣೆಗಳ ಮೂಲಕ ವಿವರಿಸಿದ್ದಾರೆ.

ಅಂಬೇಡ್ಕರರು ಹಿಂದೂಧರ್ಮದ ಸಂಪ್ರದಾಯ ಆಚರಣೆಗಳು, ರೀತಿ–ನೀತಿಗಳನ್ನು ಕಟುವಾಗಿ ವಿರೋಧಿಸುತ್ತಿದ್ದರು. ಹಿಂದೂಧರ್ಮ ತನ್ನೊಳಗೆ ಅನೇಕ ಜಾತಿಗಳನ್ನು ಸೃಷ್ಟಿಮಾಡಿ ಅವುಗಳಲ್ಲಿ ಸಾಮರಸ್ಯ ಬೆಳೆಯದಂತೆ ಪುರೋಹಿತಶಾಹಿಗಳ ಮೂಲಕ ತಡೆದಿದೆ. ಇದಕ್ಕೆ ಪುರಾಣಗ್ರಂಥಗಳು. ಹಿಂದೂಧರ್ಮದ ಅನೇಕ ದೇವರುಗಳೇ ಕಾರಣ ಎಂದು ವಿರೋಧಿಸುತ್ತಿದ್ದರು. ಈ ಅಭಿಪ್ರಾಯವನ್ನು ೧೨ನೆಯ ಶತಮಾನದ ಬಸವಣ್ಣನವರೇ ಹೇಳಿರುವುದರಿಂದ ಅವರಲ್ಲಿಯೇ ಆಧುನಿಕ ವ್ಯಕ್ತಿಯೊಬ್ಬ ಅಡಗಿದ್ದ ಎಂಬುದಾಗಿ ದೇಜಗೌ ಅವರ ಅಭಿಪ್ರಾಯವಾಗಿದೆ.

ಧರ್ಮದಲ್ಲಿಯೇ ನೈತಿಕತೆ ಅಡಕವಾಗಿದೆ ಎಂದು ಬುದ್ಧ ಹೇಳಿದರೆ ಧರ್ಮದ ಅಡಿಪಾಯವನ್ನಾಗಿಯೇ ನೀತಿನಿಯಮವನ್ನು ಬಸವಣ್ಣ ಪಾಲಿಸಿದ್ದಾರೆ. ಮನುಷ್ಯನಾಗಿ ಹುಟ್ಟಿದ ಮೇಲೆ ಅವನು ಹೇಗೆ ಬದುಕಬೇಕು ಎಂಬುದರ ನೀತಿಪಾಠದಂತಿದೆ ಬಸವಣ್ಣನವರ ಧರ್ಮ. ಮನುಷ್ಯ ತನ್ನನ್ನು ತಾನು ಮೊದಲು ಅರಿಯಬೇಕು ಆಗ ಮಾತ್ರ ಸಮಾಜವನ್ನು ಅರಿಯಲು ಸಾಧ್ಯ ಎಂಬ ವಿಚಾರವನ್ನು ಬಸವಣ್ಣನವರು ಮನದಟ್ಟು ಮಾಡಿಸಿದ್ದಾರೆ.

ಹೊಗಳಿಕೆಗೆ ತಲೆಬಾಗದ ಬಸವಣ್ಣನವರು ಪಾದಪೂಜೆಯನ್ನು ನಿರೀಕ್ಷಿಸುತ್ತಿರಲಿಲ್ಲ. ಆದರೆ ಕೆಲವರು ಅವರ ತೇಜಸ್ಸಿಗೆ, ಅಗಾಧ ಸಾಧನೆಗೆ ಪಾದ ಮುಟ್ಟಿ ನಮಸ್ಕರಿಸಿದರೆ ತಿರಸ್ಕರಿಸಲು ಆಗದೆ ಈ ವಚನದ ಮೂಲಕ ಹೀಗೆ ಹೇಳುತ್ತಾರೆ.

"ಅವರಿವರೆನ್ನದೆ ಚರಣಕ್ಕೆರಗಲು ಅಯ್ಯತನವೇಱಿ
ಬೆಬ್ಬನೆ ಬೆಱಿವೆ ನಾನು: ಕೆಚ್ಚು ಬೆಳೆಯಿತ್ತಯ್ಯಾ!
ಆ ಕೆಚ್ಚಂಗೆ ಕಿಚ್ಚನಿಕ್ಕಿ ಸುಟ್ಟು ಬೆಳ್ಳುಕನ ಮಾಡಿ
ಬೆಳುಗಾರದಂತೆ ಮಾಡು ಕೂಡಲ ಸಂಗಮದೇವಾ"[೩೯]

ಹೊಗಳಿಕೆಗೆ ಉಬ್ಬಿಹೋಗುವ ಸಾಮಾನ್ಯ ಜನರನ್ನು ಕುರಿತು ಸಂಕಟಪಡುವಂತೆ ಈ ವಚನ ರಚನೆಮಾಡಿದ್ದಾರೆ ಎಂಬುದನ್ನು ದೇಜಗೌ ಅವರು ಗುರುತಿಸಿದ್ದಾರೆ. ಹಾಗೆಯೇ ಅಂಬೇಡ್ಕರರು "ನನಗೆ ಧರ್ಮ ಬೇಕು, ಆದರೆ ಧರ್ಮದ ಹೆಸರಿನಲ್ಲಿ ಬೂಟಾಟಿಕೆ ಬೇಡ"[೪೦]

ಪ್ರತಿಯೊಬ್ಬರಿಗೂ ಧರ್ಮ ಅನಿವಾರ್ಯತೆಯನ್ನು ಈ ಮಾತಿನಿಂದ ತಿಳಿಯಬಹುದಾಗಿದೆ. ನೈತಿಕ ಧರ್ಮವನ್ನು ಸಾರಿದ ಬಸವಣ್ಣನವರ ಚಿಂತನೆಗಳು ಮತ್ತೆ ಅಂಬೇಡ್ಕರರಲ್ಲಿ ಮೂಡಿಬಂದಿರುವುದು ಆಶ್ಚರ್ಯವನ್ನುಂಟು ಮಾಡುತ್ತದೆ. ಧರ್ಮ, ಆಧ್ಯಾತ್ಮ ಎಲ್ಲಾ ವಿಚಾರಗಳಲ್ಲಿಯೂ ಇಬ್ಬರ ನಿಲುವು ಒಂದೇ ಆಗಿದ್ದರ ಬಗ್ಗೆ ದೇಜಗೌ ಅವರು ವಿಶೇಷ ಬೆಳಕು ಬೀರಿದ್ದಾರೆ.

**ರಾಜಕೀಯ ಚಿಂತನೆಗಳು:**

ರಾಜಕೀಯ ಕ್ಷೇತ್ರವನ್ನು ಶುದ್ಧಿಗೊಳಿಸಲು ಧಾರ್ಮಿಕ-ಸಾಮಾಜಿಕ ಕ್ರಾಂತಿ ಮೂಲಕ ಸಾಧ್ಯ ಎಂಬುದು ಬಸವಣ್ಣ-ಅಂಬೇಡ್ಕರರ ಅಭಿಪ್ರಾಯ. ಇಬ್ಬರ ರಾಜಕೀಯ ಚಿಂತನೆಗಳು ಸಾಮ್ಯತೆ ಕುರಿತು ದೇಜಗೌ ತುಲನಾತ್ಮಕವಾಗಿ ವಿವರಿಸಿದ್ದಾರೆ, ಸ್ಪಷ್ಟೀಕರಿಸಿದ್ದಾರೆ. ಒಂದು ರಾಷ್ಟ್ರದಲ್ಲಿ ಪ್ರಜಾಪ್ರಭುತ್ವದ ಅಗತ್ಯತೆಯನ್ನು ಇಬ್ಬರೂ

ಮುಖ್ಯವಾಗಿದೆ ಎಂದು ಹೇಳುತ್ತಾರೆ. ಬಸವಣ್ಣನವರ ಕಾಲದಲ್ಲಿ ಪ್ರಜಾಪ್ರಭುತ್ವದ ಸ್ಥಾಪನೆ ತುಂಬಾ ವಿಶಾಲವಾಗಿರದಿದ್ದರೂ ಜನಸಾಮಾನ್ಯರಿಗೆ ಸ್ವಾತಂತ್ರ್ಯವಿತ್ತು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಅನುಭವಮಂಟಪದ ಸ್ಥಾಪನೆ. ಅಲ್ಲಿ ಚರ್ಚಿತವಾಗುತ್ತಿದ್ದ ವಿಷಯಗಳು ಎಲ್ಲರಿಗೂ ಸಂಬಂಧಪಟ್ಟಂತವುಗಳಾಗಿದ್ದವು. ಆದರೆ ಈ ರೀತಿಯ ಅವಕಾಶ ಆಧುನಿಕ ಪ್ರಜಾಪ್ರಭುತ್ವದಲ್ಲಿ ನ್ಯಾಯಿಕವಾಗಿ ಲಭಿಸುತ್ತಿದ್ದೆಯೇ ಎಂಬ ಯೋಚನೆ ಮೂಡುತ್ತದೆ. ಇಂದು ಮತದಾನ ಮಾಡಿ ನಾಯಕನನ್ನು ಆಯ್ಕೆ ಮಾಡಿ ನೇಮಿಸುವ ವ್ಯವಸ್ಥೆಯನ್ನು ಕುರಿತು ಅಂಬೇಡ್ಕರರು "ಸಂಸದೀಯ ಪ್ರಜಾಪ್ರಭುತ್ವ ನಮ್ಮ ಜನರಿಗಿನ್ನೂ ವಿದೇಶೀಯವಾಗಿಯೇ ಉಳಿದಿದೆ. ಸಾಮಾನ್ಯ ಜನಕ್ಕೆ ವೋಟಿನ ಬೆಲೆ ಗೊತ್ತಿಲ್ಲ"[೪೮] ಎಂಬ ಮಾತಿನಲ್ಲಿ ಪ್ರಜೆಗಳಿಗೆ ಹಕ್ಕುಗಳ ಅರಿವು ಮೂಡಬೇಕಾಗುವುದರ ಅವಶ್ಯಕತೆಯಿದೆ ಎಂದು ಹೇಳಿರುವಂತಿದೆ. ಪ್ರಜಾಪ್ರಭುತ್ವದಲ್ಲಿ ಆನುವಂಶಿಕ ಆಡಳಿತವನ್ನು ನಿರಾಕರಿಸುತ್ತಿದ್ದರು. ಅದೇ ರೀತಿ ಸ್ವತಃ ಅರಸೊತ್ತಿಗೆಯ ಆಡಳಿತವನ್ನು ಅನುಭವಿಸಿದರೂ ಅವರ ಆಡಳಿತದ ಬಗ್ಗೆ ಸಂಪೂರ್ಣ ವಿಶ್ವಾಸ ಬಸವಣ್ಣನವರಿಗೆ ಇರಲಿಲ್ಲ. ಒಮ್ಮೆ ಹಣಕಾಸಿನ ವಿಷಯದಲ್ಲಿ ಬಿಜ್ಜಳನು ಬಸವಣ್ಣನವರನ್ನು ಅನುಮಾನ ದೃಷ್ಟಿಯಲ್ಲಿ ನೋಡಿದಾಗ

"ಆನೆ ಅಂಕುಶಕ್ಕಂಜುವುದೆ ಅಯ್ಯಾ
ಮಾಣದೆ ಸಿಂಹದ ನಖವೆಂದು ಅಂಜುವುದಲ್ಲದೆ?
ಆನೀ ಬಿಜ್ಜಳಮಗಂಜುವೆನೆ, ಅಯ್ಯಾ ಕೂಡಲ ಸಂಗಮದೇವಾ"[೪೨]

ಎಂದು ಕ್ರೋಧ ವ್ಯಕ್ತಪಡಿಸುತ್ತಾರೆ. ಬಿಜ್ಜಳನಿಗೆ ಶರಣಾಗಿದ್ದರೆ ಕೊನೆಯವರೆಗೂ ಅಧಿಕಾರದಲ್ಲಿ ಉಳಿಯಬಹುದಿತ್ತು. ಆದರೆ ಆ ರೀತಿಯ ಶರಣಾಗತಿ ಬಸವಣ್ಣನವರಿಗೆ ಬೇಕಿರಲಿಲ್ಲ. ಸರ್ವರಿಗೆ ಸಮಬಾಳು, ಸರ್ವರಿಗೆ ಸಮಪಾಲು ಎಂಬುದು ಬಸವಣ್ಣ-ಅಂಬೇಡ್ಕರರ ನಿಲುವು. ಈ ಇಬ್ಬರು ಮಹಾನ್ ವ್ಯಕ್ತಿಗಳು ಯಾವುದೆ ಪದವಿ, ಅಧಿಕಾರಗಳಿಗೆ ಆಸೆಪಟ್ಟವರಲ್ಲ.

"ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ
ರುದ್ರಪದವಿಯನೊಲ್ಲೆ
ನಾನು ಮತ್ತಾವ ಪದವಿಯಗೊಲ್ಲೆನಯ್ಯಾ
ಕೂಡಲಸಂಗಮದೇವಾ, ನಿಮ್ಮ ಸದ್ಭಕ್ತರ
ಪಾದವನರ್ಜಿದಿಪ್ಪ ಮಹಾಪದವಿಯ ಕರುಣಿಸಯ್ಯಾ"[೪೩]

ಎಂದು ಬಸವಣ್ಣ ಪದವಿಗಳನ್ನು ತಿರಸ್ಕರಿಸುತ್ತಾರೆ. ಹಾಗೆಯೇ ಅಂಬೇಡ್ಕರರು ಯಾವುದೇ ಅಧಿಕಾರ ಆಸೆಗಾಗಿ ಆತ್ಮಗೌರವ, ಸ್ವಾಭಿಮಾನವನ್ನು ಬಿಟ್ಟುಕೊಟ್ಟವರಲ್ಲ. "ಜಗತ್ತಿನಲ್ಲೇ ಅತಿಹೆಚ್ಚು ವಿದ್ಯಾಭ್ಯಾಸ ಮಾಡಿದ್ದ ಹಾಗೂ ಬಹುದೊಡ್ಡ ಜ್ಞಾನಿಯಾಗಿದ್ದ ಡಾ. ಅಂಬೇಡ್ಕರರು ತನ್ನ ಜ್ಞಾನವನ್ನು ವಾಣಿಜ್ಯೋದ್ಯಮಕ್ಕೆ ಬಳಸಿಕೊಂಡಿದ್ದರೆ ಸಾವಿರಾರು ಕೋಟಿ ರೂಪಾಯಿಗಳ ವಹಿವಾಟು ಹೊಂದಿದ ಬಹುದೊಡ್ಡ ವಾಣಿಜ್ಯೋದ್ಯಮಿಯಾಗಿ ವಿಶ್ವದ ಅತಿದೊಡ್ಡ ಶ್ರೀಮಂತರಾಗಬಹುದಿತ್ತು. ಅವರಿಗಿದ್ದ ಜ್ಞಾನ ಮತ್ತು ಪ್ರತಿಭೆಗೆ ಅವರು ಬಯಸಿದ ಪ್ರಪಂಚದ ಯಾವುದೇ ದೇಶದಲ್ಲಿ ಉನ್ನತ ಹುದ್ದೆ ಪಡೆದು ಅಲ್ಲಿಯೇ ತನ್ನ ಸಂಸಾರದ ಸಮೇತ ನೆಲಸಬಹುದಿತ್ತು."[೪೮] ಲೇಖಕರ ಈ ಅಭಿಪ್ರಾಯದಲ್ಲಿ ಅಂಬೇಡ್ಕರರಿಗಿದ್ದ ಅಗಾಧ ಪ್ರತಿಭೆ, ಜ್ಞಾನ ಎಷ್ಟಿತ್ತು ಎಂಬುದರ ವಿಷಯ ತಿಳಿದುಬರುತ್ತದೆ. ಅವರ ನಿಸ್ವಾರ್ಥಪರತೆಯು ಮತ್ತೆ ಬಸವಣ್ಣನವರ ಬಳಿಯೆ ಕರೆದೊಯ್ಯುತ್ತವೆ. ಅಂಬೇಡ್ಕರರು ತಮಗೆ ಸಿಕ್ಕ ದೊಡ್ಡ ದೊಡ್ಡ ಪದವಿಗಳನ್ನು ತ್ಯಜಿಸಿ ದೀನದಲಿತರ ಹೋರಾಟಕ್ಕೆ ನಿಲ್ಲುತ್ತಾರೆ. ತಾವು ರಾಜ್ಯಾಂಗ ರಚನಾ ಸಮಿತಿ ಅಧ್ಯಕ್ಷರಾಗಿದ್ದಾಗ ಅನುಭವಿಸಿದ ಅವಮಾನ, ತಿರಸ್ಕಾರ, ನೋವುಗಳನ್ನು ಸಹಿಸುತ್ತಲೇ ಸೂಕ್ತ ಸಂವಿಧಾನ ರಚಿಸಿದರು. ತಮ್ಮ ಆತ್ಮಗೌರವಕ್ಕೆ ಧಕ್ಕೆ ಮಾಡಿದ ಹುದ್ದೆಗಳಿಗೆ ರಾಜೀನಾಮೆ ನೀಡಿ ಹೊರಬರುತ್ತಾರೆ. "ನೆಹರೂ ಅವರನ್ನಾಗಲಿ, ಹಿಂದೂ ದೊರೆಗಳನ್ನಾಗಲಿ ಅವರು ಕುರಿಯಂತೆ ಹಿಂಬಾಲಿಸಿದ್ದರೆ, ಸಾಯುವತನಕ ಅಧಿಕಾರ ಭೋಗ ವೈಭವವನ್ನಭವಿಸಬಹುದಿತ್ತು. ಎಲ್ಲಾ ಅವಮಾನಗಳನ್ನು ಸಹಿಸಿಕೊಂಡು ಅಧಿಕಾರದಲ್ಲುಳಿದ್ದರೆ ಅವರು ತ್ಯಾಗವೀರರಾಗಿ ಸತ್ವಸಂಪನ್ನರಾಗಿ ಅದ್ವಿತೀಯರಾಗಿ ಕೀರ್ತಿಶಿಖರವನ್ನೇರುವಂತಿರಲಿಲ್ಲ. ಅವರು ಸಾವಿರದಲ್ಲೋ ಲಕ್ಷದಲ್ಲೋ ಒಬ್ಬರಾಗಿ ಐತಿಹಾಸಿಕವಾಗಿ ಅಜ್ಞಾತರಾಗುತ್ತಿದ್ದರು"[೪೯] ಎಂಬ ದೇಜಗೌ ಅವರ ಮಾತುಗಳಲ್ಲಿ ಅಂಬೇಡ್ಕರವರ ವ್ಯಕ್ತಿತ್ವವೇ ಅಡಗಿದೆ.

ಮತಾಂತರ ವಿಷಯಕ್ಕೆ ಬಂದರೆ ಅದರಲ್ಲೂ ಸಾಮ್ಯತೆಯನ್ನು ಗುರುತಿಸಿದ್ದಾರೆ ದೇಜಗೌ ಅವರು. ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ಬಸವಣ್ಣ ಅದರ ಆಚಾರ–ಸಂಪ್ರದಾಯಗಳನ್ನು ವಿರೋಧಿಸಿ ತಾವೇ ಒಂದು ಧರ್ಮ ಪ್ರಾರಂಭಿಸಿದರು. ಅದೇ ವೀರಶೈವಧರ್ಮ. ಇದರ ಉದ್ದೇಶಗಳೆಲ್ಲವೂ ಸಮಾಜದ ಪರವಾಗಿದ್ದವು. ಲಿಂಗಧಾರಣೆಯ ಮೂಲಕ ಸಮಾಜದ ಅತ್ಯಂತ ಕೆಳವರ್ಗದ ವ್ಯಕ್ತಿಯನ್ನು ಶರಣನನ್ನಾಗಿಸಿದರು. ಈ ಮೂಲಕ ಅವರಿಗೆ ಸಾಮಾಜಿಕ ಸ್ಥಾನಮಾನ ಲಭಿಸುವಂತೆ ಮಾಡಿದರು.

ಹಾಗೆಯೇ ಅಂಬೇಡ್ಕರರು ಹುಟ್ಟಿದ್ದು ಕೆಳಜಾತಿಯಲ್ಲಿ ಸ್ವೀಕರಿಸಿದ್ದು ಬೌದ್ಧಧರ್ಮ. "ಬುದ್ಧನಂತೆ ಮತ್ತು ಬೌದ್ಧ ಮತದಂತೆ ಅಂಬೇಡ್ಕರರ ಮೇಲೆ ಪ್ರಭಾವ ಬೀರಿದ ಮಹಾಪುರುಷ ಮಹಾಶಕ್ತಿ ಮತ್ತೊಂದಿಲ್ಲ"[೪೬] ಹಿಂದೂಧರ್ಮದಲ್ಲಿದ್ದ ಅಸಮಾನತೆ, ಚಾತುರ್ವರ್ಣ ಪದ್ಧತಿಯ ಶೋಷಣೆ ಬೌದ್ಧಧರ್ಮದಲ್ಲಿರಲಿಲ್ಲ. ಬ್ರಹ್ಮನ ಶರೀರದಿಂದ ಮನುಷ್ಯ ಹುಟ್ಟಿದನೆಂಬ ಕಲ್ಪನೆಯನ್ನೇ ಬುದ್ಧ ತಿರಸ್ಕರಿಸುತ್ತಾನೆ. ಬಸವಣ್ಣನನ್ನು ತಿಳಿಯದಿದ್ದ ಅಂಬೇಡ್ಕರರು ಬುದ್ಧನ ಚಿಂತನೆಗಳಿಗೆ ಮಾರುಹೋಗಿದ್ದರು. ಮಾನವೀಯ ನೆಲೆಯಲ್ಲಿದ್ದುದರಿಂದ ಅವುಗಳಿಗೆ ಪ್ರಭಾವಿತರಾಗಿದ್ದರು. ಇಲ್ಲಿ ದೇಜಗೌ ಅವರು ಬುದ್ಧ-ಬಸವ- ಅಂಬೇಡ್ಕರರಲ್ಲಿ ಸಾಮ್ಯತೆಯನ್ನು ಕಂಡಿರಿಸಿದ್ದಾರೆ. ಅಂಬೇಡ್ಕರ್ ಅವರು ತಾವು ಸಾಯುವಾಗ ಹಿಂದೂವಾಗಿರುವುದಿಲ್ಲ ಎಂಬ ಹೇಳಿಕೆಯಲ್ಲಿಯೇ ಹಿಂದೂಧರ್ಮವನ್ನು ಎಷ್ಟು ನಿರಕರಿಸಿದ್ದರು ಎಂಬ ಅಂಶ ತಿಳಿದುಬರುತ್ತದೆ. ಅಂಬೇಡ್ಕರ್ ಅವರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳಲು ಇಸ್ಲಾಂ, ಕ್ರಿಶ್ಚಿಯನ್, ಸಿಖ್ ಮತಾನುಯಾಯಿಗಳು ಪ್ರಯತ್ನಪಟ್ಟಿದ್ದರು ಎಂಬ ಸತ್ಯವನ್ನು ದೇಜಗೌ ಅವರು ತಿಳಿಸಿದ್ದಾರೆ. ಆದರೆ ಯಾವುದೇ ಬಲತ್ಕಾರಕ್ಕೂ ಬಗ್ಗದೆ ಬೌದ್ಧಧರ್ಮವನ್ನು ಸ್ವೀಕರಿಸುತ್ತಾರೆ. ಯಾವ ಧರ್ಮಕ್ಕೆ ಸೇರಿದರೆ ದಲಿತರಿಗೆ ಒಳಿತಾಗಬಹುದೆಂಬ ಉದ್ದೇಶದಿಂದ ಬೌದ್ಧ ಧರ್ಮಕ್ಕೆ ಸೇರುವ ನಿರ್ಧಾರ ಕೈಗೊಂಡರು. ಇದಕ್ಕೆ ಕಾರಣವನ್ನು ದೇಜಗೌ ಅವರು ಅಂಬೇಡ್ಕರ್ ಮಾತುಗಳ ಮೂಲಕ ಸ್ಪಷ್ಟಪಡಿಸುತ್ತಾರೆ. "ತಾನು ಪರಮದೈವವೆಂದು ಕೃಷ್ಣ ಹೇಳಿಕೊಂಡ, ತಾನು ದೇವರ ಮಗನೆಂದು ಕ್ರಿಸ್ತ ಘೋಷಿಸಿಕೊಂಡ, ತಾನು ದೇವರ ಅಂತಿಮದೂತನೆಂದು ಮಹಮದ್ ಪೈಗಂಬರ್ ಉಗ್ಗಡಿಸಿದ. ಎಲ್ಲ ಮತಸ್ಥಾಪಕರು ಮೋಕ್ಷದಾತರೆಂದು ಹೇಳಿಕೊಳ್ಳುವಾಗ ಬುದ್ಧನೊಬ್ಬನೇ ತಾನು ಮಾರ್ಗದರ್ಶಿ ಎಂದು ಹೇಳಿಕೊಳ್ಳುತ್ತಾನೆ."[೪೭]

ಹಾಗೆಯೇ ಬಸವಣ್ಣನವರು ಎಲ್ಲಿಯೂ ತಾನು ಶಿವನ ಅವತಾರ ಎಂದು ಹೇಳಿಕೊಂಡಿಲ್ಲ. "ನೀನು ಆಕಾರವಾಗಿರ್ದಲ್ಲಿ ನಾನು ವೃಷಭವೆಂಬ ವಾಹನವಾಗಿರ್ದೆ ಕಾಣಾ"[೪೮] ಎಂಬ ಮಾತಿನ ಮೂಲಕ ಸೌಜನ್ಯ ಮೆರೆದಿದ್ದಾರೆ.

ಅಂಬೇಡ್ಕರ್ ಅವರ ವಿಚಾರದಲ್ಲಿ ದೇಜಗೌ ಅವರು ಮತ್ತೊಂದು ವಿಚಾರವನ್ನು ತಿಳಿಸುತ್ತಾರೆ. ಮತಾಂತರದ ವಿಷಯದಲ್ಲಿ ಏಕಾಏಕಿ ಬೌದ್ಧಧರ್ಮವನ್ನು ಸ್ವೀಕರಿಸಲಿಲ್ಲ. ಹಲವಾರು ಮಗ್ಗುಲುಗಳಲ್ಲಿ ಆಲೋಚನೆ ಮಾಡಿ ಸ್ವೀಕರಿಸಿದರು. ಇದಕ್ಕಿಂತ ಮೊದಲು ಅಂಬೇಡ್ಕರರಿಗೆ ವಚನಗಳ ಆಂಗ್ಲ ಅಥವಾ ಇಂಗ್ಲಿಷ್ ಭಾಷಾಂತರಗಳು ದೊರೆತಿದ್ದರೆ ಇನ್ನಷ್ಟು ಗೊಂದಲಕ್ಕೀಡಾಗುತ್ತಿದ್ದರು. ಏನೇ ಆದರೂ ಮಾನವೀಯ ನೆಲೆಯಲ್ಲಿರುವ

ಧರ್ಮವನ್ನು ೧೯೫೬–೧೦–೧೪ರಂದು ನಾಗಾಪುರದಲ್ಲಿ ಸಹಸ್ರಾರು ಜನರ ಸಮಕ್ಷಮದಲ್ಲಿ ಬೌದ್ಧಧರ್ಮ ಸ್ವೀಕರಿಸುತ್ತಾರೆ. ಆದರೆ ಅಂಬೇಡ್ಕರರ ಮರಣಾನಂತರ ಬೌದ್ಧಧರ್ಮ ಯಶಸ್ವಿಯಾಗಿ ಹರಡಲು ಸಾಧ್ಯವಾಗಲಿಲ್ಲ. ಇದಕ್ಕೆ ಕಾರಣ ಯುಗ ಪರಿಸರ ಹಾಗೂ ದಲಿತರು ಹೊರತಾಗಿ ಬೇರೆಯವರು ಅದನ್ನು ಸ್ವೀಕರಿಸದೆ ಇದ್ದದ್ದು ಎಂಬ ಕಾರಣಗಳನ್ನು ದೇಜಗೌ ಕೊಡುತ್ತಾರೆ. ೧೨ನೆಯ ಶತಮಾನದಲ್ಲಿಯೇ ಶೋಷಿತರ ಪರವಾಗಿ ಹೋರಾಡಿದ ಬಸವಣ್ಣನವರ ಅನುಭವಗಳು ಆಧುನಿಕ ಕಾಲದಲ್ಲಿ ಅಂಬೇಡ್ಕರರಿಗೆ ಅಷ್ಟೊಂದು ತೀವ್ರತರವಾಗಿ ಅನುಭವಕ್ಕೆ ಬರಲಿಲ್ಲವೇನೋ ಎಂಬ ಅಭಿಪ್ರಾಯ ದೇಜಗೌ ಅವರದು.

**ಆರ್ಥಿಕ ಚಿಂತನೆಗಳು**

ಆರ್ಥಿಕ ಚಿಂತನೆಗಳಲ್ಲಿಯೂ ಬಸವಣ್ಣ– ಅಂಬೇಡ್ಕರರಲ್ಲಿ ದೇಜಗೌ ಅವರು ಸಾಮ್ಯತೆಯನ್ನು ಗುರುತಿಸಿದ್ದಾರೆ. ಅಷ್ಟೇ ಗಂಭೀರವಾಗಿಯೂ ಇದೆ. ವಿದೇಶದಲ್ಲಿ ಪದವಿ ಪಡೆದ ಅಂಬೇಡ್ಕರ್ ಚಿಂತನೆಗಳ ಮುಂದೆ ೧೨ನೆಯ ಶತಮಾನದ ಬಸವಣ್ಣನವರ ಚಿಂತನೆಗಳು ಬಹಳಷ್ಟು ಎತ್ತರದಲ್ಲಿಯೇ ಇವೆ. ಬಂಡವಾಳಶಾಹಿ ಪದ್ಧತಿಯ ವಿರುದ್ಧ ಇಬ್ಬರೂ ಕಿಡಿಕಾರಿದ್ದರು. ಕಾಯಕ–ದಾಸೋಹ ಬಸವಣ್ಣನವರ ಆರ್ಥಿಕ ತತ್ವಗಳಾದರೆ, ಸಾಮೂಹಿಕ ಕೃಷಿ ಪದ್ಧತಿ, ಉತ್ಪನ್ನ ಮೂಲಗಳ ರಾಷ್ಟ್ರೀಕರಣ, ವಿಮಾ ವಾಣಿಜ್ಯದ ಸರ್ಕಾರೀಕರಣ ಇವು ಅಂಬೇಡ್ಕರರ ಆರ್ಥಿಕ ಚಿಂತನೆಗಳು. ಅಂಬೇಡ್ಕರರ ಬಹುತೇಕ ವಿಚಾರಗಳು ಬುದ್ಧನ ತತ್ವಗಳಿಗನುಗುಣವಾಗಿವೆ. ಆದರೆ ಬಸವಣ್ಣನವರ ಆರ್ಥಿಕ ವಿಚಾರಗಳು ಆಧುನಿಕ ಅರ್ಥಶಾಸ್ತ್ರಜ್ಞನಿಗೂ ಅರಿಯದಷ್ಟು ಎತ್ತರದಲ್ಲಿವೆ.

"ಕಾಯಕದಲ್ಲಿ ನಿರುತನಾದರೆ, ಗುರುದರ್ಶನವಾದರೂ ಮರೆಯಬೇಕು
ಲಿಂಗಪೂಜೆಯಾದರೂ ಮರೆಯಬೇಕು
ಜಂಗಮ ಮುಂದಿದ್ದರೂ ಹಂಗು ಹರಿಯಬೇಕು
ಕಾಯಕವೇ ಕೈಲಾಸವಾದ ಕಾರಣ
ಅಮರೇಶ್ವರಲಿಂಗವಾಯಿತ್ತಾದರೂ ಕಾಯಕದೊಳಗು"[೪೯]

ಬಸವಣ್ಣನವರ ಕಾಯಕದ ಮಹತ್ವ ಮತ್ತೊಬ್ಬ ಶರಣ ಆಯ್ದಕ್ಕಿ ಮಾರಯ್ಯನ ವಚನದಲ್ಲಿ ವ್ಯಕ್ತವಾಗಿದೆ.

ಹೆಚ್ಚು ಆಸ್ತಿ ಮಾಡುವುದು ಒಳ್ಳೆಯದಲ್ಲ. ಅನ್ಯಾಯದಿಂದ ಸಂಪಾದಿಸಿದ ಹಣ ವ್ಯರ್ಥ ಎಂಬುದು ಬಸವಣ್ಣನವರ ಕರೆ. ಪ್ರಕೃತಿಯನ್ನು ಉದಾಹರಿಸಿ ಬಸವಣ್ಣನವರು ಮನುಷ್ಯನ ಸಂಗ್ರಹ ಬುದ್ಧಿ, ಆಸೆ ಯಾವ ಮಟ್ಟದಲ್ಲಿದೆ ಎಂಬುದನ್ನು ಅರ್ಥಮಾಡಿಸುತ್ತಾರೆ. ಒಂದು ಮರವಾದರೂ, ಗಿಡವಾದರೂ ಹಣ್ಣು-ಹಂಪಲುಗಳನ್ನು, ಹೂವನ್ನಾದರೂ ಹಿಂತಿರುಗಿ ಕೊಡುತ್ತವೆ. ಮೋಡವಾದರೂ ಹೀರಿದ ನೀರನ್ನು ಮಳೆಯಾಗಿ ಹಿಂತಿರುಗಿಸುತ್ತದೆ. ಆದರೆ ಮನುಷ್ಯ ಅದನ್ನೆಲ್ಲಾ ಬಳಸಿಕೊಳ್ಳುತ್ತಾನೆಯೇ ಹೊರತು ಹಿಂತಿರುಗಿ ಏನನ್ನೂ ಕೊಡುವ ಮನಸ್ಸು ಮಾಡುವುದಿಲ್ಲ. ಅವಶ್ಯಕತೆಗಿಂತ ಹೆಚ್ಚಾಗಿ ಸಂಪಾದಿಸಿ ತಾನು ಬಳಸದೆ ಇತರರಿಗೂ ಕೊಡದೆ ವ್ಯರ್ಥವಾಗಿ ಕೂಡಿಡುತ್ತಾನೆ. ಅದನ್ನೇ ಬಸವಣ್ಣನವರು ಕಪ್ಪುಹಣವೆಂದು ೧೨ನೆಯ ಶತಮಾನದಲ್ಲಿಯೇ ಕರೆದಿದ್ದರು. ಇಂದು ಕೂಡಿಟ್ಟಿರುವ ಕೋಟ್ಯಾಂತರ ರೂಪಾಯಿ ಕಪ್ಪುಹಣದ ಹಗರಣ ಇದಕ್ಕೆ ಸಾಕ್ಷಿಯಾಗಿದೆ.

> "ಪಾಪಿಯ ಧನಪ್ರಾಯಶ್ಚಿತಕ್ಕಲ್ಲದೆಸತ್ಪಾತ್ರಕ್ಕೆ ಸಲ್ಲದಯ್ಯ,
> ನಾಯ ಹಾಲು ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯ!
> ನಮ್ಮ ಕೂಡಲ ಸಂಗನ ಶರಣರಿಗಲ್ಲದೆ
> ಮಾಡುವ ಅರ್ಥ ವ್ಯರ್ಥ ಕಂಡಯ್ಯ"[೫೦]

ಸಂಗ್ರಹ ಮಾಡಿಕೊಂಡ ಹಣ ಒಳ್ಳೆಯ ಕಾರ್ಯಕ್ಕೆ ವಿನಿಯೋಗವಾಗಬೇಕು ಆಗ ಮಾತ್ರ ಆ ಹಣಕ್ಕೆ ಬೆಲೆ ಎಂಬುದರ ಜೊತೆಗೆ ಇಂದು ಚುನಾವಣೆಗಾಗಿ ವ್ಯಯಮಾಡುವ ಕೋಟ್ಯಾಂತರ ರೂಪಾಯಿ ಹಣ ಎಷ್ಟು ವ್ಯರ್ಥ ಎಂದು ಅಂದು ಬಸವಣ್ಣನವರೇ ಕರೆಕೊಟ್ಟಿದ್ದರು ಎಂದು ದೇಜಗೌ ಅವರು ನೆನೆಸುತ್ತಾರೆ. ಹಾಗೆಯೇ ಪ್ರಾಣಿಗಳಲ್ಲಿರುವ ಸಹಕಾರ ಗುಣ ಮನುಷ್ಯನಲ್ಲಿ ಇಲ್ಲ. ಹಂಚಿ ತಿನ್ನುವ ಬುದ್ಧಿಯನ್ನು ಅವುಗಳನ್ನು ನೋಡಿ ಕಲಿಯಬೇಕೆಂಬುದು ಬಸವಣ್ಣನವರ ತತ್ವ

> "ಕಾಗೆ ಒಂದಗುಳ ಕಂಡಡೆ ಕರೆಯದೆ ತನ್ನ ಬಳಗವನು?
> ಕೋಳಿ ಒಂದು ಕುಟುಕ ಕಂಡಡೆ ಕರೆಯದೆ ತನ್ನ ಕುಲವನೆಲ್ಲವ?
> ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದಡೆ ಕಾಗೆ ಕೋಳಿಯಿಂದ ಕರಕಷ್ಟ
> ಕೂಡಲ ಸಂಗಮದೇವಾ"[೫೧]

ಪ್ರಾಣಿ ಪಕ್ಷಿಗಳಿಗಿಂತ ವಿಶಿಷ್ಟವಾದ ಶಕ್ತಿ, ಬುದ್ಧಿಯುಳ್ಳ ಮನುಷ್ಯನಿಗೆ ಹಂಚಿ ತಿನ್ನುವ ಮನಸ್ಸು ಇಲ್ಲ. ಪ್ರಾಣಿಗಳಲ್ಲಿರುವ ದಯೆ, ಸಹಕಾರ ತತ್ವವನ್ನು ಮನುಷ್ಯ

ರೂಢಿಸಿಕೊಂಡರೆ ಬಡತನ–ಶ್ರೀಮಂತಿಕೆ ದೂರವಾಗಬಹುದೇನೋ ಎಂದು ಬಸವಣ್ಣನವರು ಮಾರ್ಮಿಕವಾಗಿ ನುಡಿದಿದ್ದನ್ನು ದೇಜಗೌ ಸ್ಮರಿಸುತ್ತಾರೆ.

"ಹೊತ್ತಾರೆ ಎದ್ದು ಕಣ್ಣು ಹೊಸೆಯುತ್ತ
ಎನ್ನ ಒಡಲಿಂಗೆ, ಎನ್ನ ಒಡವೆಗೆ, ಎನ್ನ ಮಡದಿ ಮಕ್ಕಳಿಗೆಂದು
ಕುದಿದೆನಾದಡೆ ಎನ್ನ ಮನಕ್ಕೆ ಮನವೇ ಸಾಕ್ಷಿ"[೫೨]

ತಾನು ರೂಪಿಸಿಕೊಂಡ ಸಂಸಾರವನ್ನು ಸಾಕಿ ಸಲಹುವುದು ಕರ್ತವ್ಯ. ಅದನ್ನು ನಿಭಾಯಿಸಲು ಅನ್ಯಾಯ ಮಾರ್ಗದಿಂದ ಹಣ ಸಂಪಾದನೆ ಮಾಡಬಾರದು. ಧರ್ಮಕ್ಕೆ ಅನುಗುಣವಾಗಿ ಹಣ ಸಂಪಾದನೆ ಮಾಡಿ ನಂಬಿದವರನ್ನು ಕಾಪಾಡಬೇಕು. ದುಂದುವೆಚ್ಚ, ಭೋಗಜೀವನವನ್ನು ಬಸವಣ್ಣ ತಿರಸ್ಕರಿಸುವುದರ ಜೊತೆಗೆ ಇದೇ ಬಡತನಕ್ಕೆ ದಾರಿ ಎಂದು ಕರೆ ನೀಡಿದ್ದಾರೆ.

"ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯ
ಭಕ್ತಿನಾಯಿತ್ತೆ ಭಕ್ತಿ ದಾಸೋಹ. ಮುಕ್ತ ನಾಯಿತ್ತೆ ಮುಕ್ತಿ ದಾಸೋಹ
ಐಕ್ಯನಾಯಿತ್ತೆ ಮಮಕಾರ ದಾಸೋಹ"

"ಕಾಯದಿಂದ ಉತ್ಪತ್ತಿ, ದಾಸೋಹದಿಂದ ವಿತರಣೆ – ಇದು ಶರಣರ ಆರ್ಥಿಕ ನೀತಿ"[೫೩] ವಚನಕಾರರ ಈ ವಿಧಾನ ಬಹಳ ಮಹತ್ವವನ್ನು ಪಡೆದುದಾಗಿದೆ. ತನ್ನಲ್ಲಿರುವುದನ್ನು ಪರರಿಗೂ ದಾನಮಾಡಬೇಕೆಂಬ ದಾರ್ಶನಿಕರಾದ ಟಾಲ್‌ಸ್ಟಾಯ್, ರಸ್ಕಿನ್, ಗಾಂಧೀಜಿಯವರ ಅಭಿಪ್ರಾಯವನ್ನು ೧೨ನೆಯ ಶತಮಾನದಲ್ಲೇ ಬಸವಣ್ಣನವರು ಹೇಳಿದ್ದಾರೆ. ಹಣದಿಂದ ಶ್ರೀಮಂತರಾಗಿರುವವರ ಬಗ್ಗೆ ಬಸವಣ್ಣನವರು ಬಹಳ ಅರ್ಥಗರ್ಭಿತವಾಗಿ ಹೇಳುತ್ತಾರೆ. "ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ"[೫೪] ಬಹಳ ಜನರಿಗೆ ಅನುಭವಕ್ಕೆ ಬಂದಿರುವ ಮಾತಾಗಿದೆ. ಶ್ರೀಮಂತರ ಅಟ್ಟಹಾಸ, ದೌರ್ಜನ್ಯ, ದಬ್ಬಾಳಿಕೆ ಅಂದಿನಂತೆ ಇಂದೂ ಮುಂದುವರೆದಿದೆ. ಏನೇ ಶ್ರೀಮಂತರಾಗಿದ್ದರೂ ಅವರಿಗೆ ಸತ್ಯದ ಅರಿವಾಗಬೇಕು ಎಂದು ಬಸವಣ್ಣ ಬಯಸುತ್ತಾರೆ.

ಬಸವಣ್ಣನವರಂತೆ ಅಂಬೇಡ್ಕರರು ಸಮಾಜದ ಏಳ್ಗೆಗಾಗಿ ಆರ್ಥಿಕ ಪ್ರಗತಿ ಮುಖ್ಯ ಎಂದು ಬಯಸಿದರು. ಬಡತನ ಹೋಗಬೇಕಾದರೆ ಸರ್ವರು ದುಡಿಯಬೇಕೆಂಬ ಕರೆ ನೀಡುತ್ತಾರೆ. ಆರ್ಥಿಕ ಏರುಪೇರುಗಳನ್ನು ಸರಿಪಡಿಸಲು ಭೂಸುಧಾರಣೆ, ರಾಷ್ಟ್ರೀಕರಣ ಕೈಗಾರೀಕೀಕರಣ ಬೆಂಬಲಿಸಿದ್ದಾರೆ. ಮಾನವೀಯ

ಹೃದಯವುಳ್ಳ ಬಸವಣ್ಣ – ಅಂಬೇಡ್ಕರರಲ್ಲಿ ಸರ್ವೋದಯ ಕಲ್ಪನೆಯಿತ್ತು. ಧಾರ್ಮಿಕ ಕ್ರಾಂತಿಯ ಮೂಲಕ ಸಾಮಾಜಿಕ ಆರ್ಥಿಕ ಪ್ರಗತಿ ಸಾಧ್ಯ ಎಂಬುದು ಬಸವಣ್ಣನವರ ನಿಲುವಾದರೆ, ಸಾಮಾಜಿಕ ಕ್ರಾಂತಿಯ ಮೂಲಕ ರಾಜಕೀಯ ಪ್ರಗತಿ, ಆರ್ಥಿಕ ಪ್ರಗತಿ ಸಾಧ್ಯ ಎಂಬುದು ಅಂಬೇಡ್ಕರರ ನಿಲುವು. ಅಂಬೇಡ್ಕರರ ಧಾರ್ಮಿಕ ಕಲ್ಪನೆ ಲೌಕಿಕ ಸಿದ್ಧಿಗಾಗಿ ಇದ್ದರೆ, ಬಸವಣ್ಣನವರ ಧಾರ್ಮಿಕ ಪ್ರಜ್ಞೆ ಪಾರಮಾರ್ಥಿಕ ಸಿದ್ಧಿಸಾಧನೆಗಳನ್ನು ಒಳಗೊಂಡಿದೆ. ಆದರೆ ಇಬ್ಬರ ಧಾರ್ಮಿಕ ಅರಿವು ಸಮಾಜದ ಒಳಿತಿಗಾಗಿಯೇ. ಇಬ್ಬರದೂ ಚಾತುರ್ವರ್ಣ ಪದ್ಧತಿಯನ್ನು ನಾಶಮಾಡಿ ಸಾಮಾಜಿಕ ಸಮಾನತೆ ತರುವುದು.

ಬಸವಣ್ಣನವರು ತಾವು ಸ್ಥಾಪಿಸಿದ ಧರ್ಮಕ್ಕೆ ಎಲ್ಲರನ್ನೂ ಸೇರಿಸಿಕೊಂಡು ಹೃದಯ ವೈಶಾಲ್ಯವನ್ನು ಮೆರೆದರೆ, ಅಂಬೇಡ್ಕರರು ಬೌದ್ಧಧರ್ಮ ಸ್ವೀಕರಿಸುವುದರ ಮೂಲಕ ಅನೇಕ ದಲಿತರನ್ನು ಬೌದ್ಧಧರ್ಮ ಸ್ವೀಕರಿಸುವಂತೆ ಪ್ರೇರೇಪಿಸಿದರು. ಕಾಯಕ ದಾಸೋಹಗಳ ಮೂಲಕ ಬಸವಣ್ಣನವರು ಹೊಸ ಆರ್ಥಿಕ ಪ್ರಜ್ಞೆಯನ್ನು ಜನರಲ್ಲಿ ⁄ ಮೂಡಿಸಿದರೆ, ಸರ್ವರು ದುಡಿಮೆಗೆ ತೊಡಗಿದಾಗ ಆರ್ಥಿಕ ಅಸಮಾನತೆಯನ್ನು ಹೋಗಲಾಡಿಸಬಹುದೆಂದು ಅಂಬೇಡ್ಕರ್ ಕರೆಕೊಟ್ಟರು.

ಎಲ್ಲಾ ನೆಲೆಗಳಿಂದಲೂ ಬುದ್ಧ–ಬಸವ– ಅಂಬೇಡ್ಕರರನ್ನು ತೌಲನಿಕವಾಗಿ ಪರಿಚಯಿಸಿದ ದೇಜಗೌ ಅವರು ಅಂಬೇಡ್ಕರರ ಮಾತನ್ನು ಉದ್ಧರಿಸಿದ್ದಾರೆ. "ಮರದ ಹಾಗೆ ಬೆಳೆದು ಏನನ್ನೂ ಸಾಧಿಸದಿರುವುದಕ್ಕಿಂತ ಮಹಾಕಾರಣಕ್ಕಾಗಿ ಹರೆಯದಲ್ಲಿಯೇ ಸಾಯುವುದು ಮೇಲು"[೫೫] ಬಸವಣ್ಣನವರನ್ನು ಕುರಿತೇ ಅಂಬೇಡ್ಕರರು ಹೇಳಿರುವಂತಿದೆ ಎಂದು ಅಭಿಪ್ರಾಯಪಡುತ್ತಾರೆ ದೇಜಗೌ ಅವರು. "ಬಸವಣ್ಣನವರನ್ನು ಬುದ್ಧನಿಗೆ ಹೋಲಿಸಬಹುದಾದರೆ, ಅಂಬೇಡ್ಕರರನ್ನು ಸಂತಪಾಲನಿಗೆ ಹೋಲಿಸಬಹುದೆಂದು ತೋರುತ್ತದೆ"[೫೬] ಎಂಬ ದೇಜಗೌ ಅವರ ಅಭಿಪ್ರಾಯವು ಮೂವರ ವ್ಯಕ್ತಿತ್ವವು ಹೋಲಿಸಲಾಗದಷ್ಟು ಎತ್ತರದಲ್ಲಿದೆ ಎಂಬ ವಿಷಯವನ್ನು ಸ್ಪಷ್ಟಪಡಿಸುತ್ತದೆ.

## ಕೊನೆಟಿಪ್ಪಣಿಗಳು

೧. ದೇಜಗೌ, ಬಸವದರ್ಶನ, ಪ್ರಥಮಮುದ್ರಣ (೨೦೦೪), ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಪು. ೩–೪.

೨. ಅದೇ., ಪು. ೪೯.

೩. ಅದೇ., ಪು. ೫೧.

೪. ಅದೇ., ಪು. ೫೮.

೫. ಬಂಗಾರಪ್ಪ ಹೊ.ನ.ಪುರ, ಮಾನವಧರ್ಮದ ಪ್ರತಿಪಾದಕರು, ಪುಟ. ೨೬, ಮೊದಲ ಮುದ್ರಣ (೨೦೦೪), ಚಿಂತನ ಪ್ರಕಾಶನ, ಹೊಳೇನರಸೀಪುರ, ಹಾಸನ ಜಿಲ್ಲೆ.

೬. ದೇಜಗೌ, ಬಸವದರ್ಶನ, ಮೊದಲಮುದ್ರಣ (೨೦೦೪), ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಪು. ೬೯

೭. ಅದೇ., ಪು. ೭೨.

೮. ಅದೇ., ಪು. ೭೨.

೯. ಅದೇ., ಪು. ೭೩.

೧೦. ಅದೇ., ಪು. ೭೨.

೧೧. ಅದೇ., ಪು. ೭೬.

೧೨. ಅದೇ., ಪು. ೭೭.

೧೩. ಅದೇ., ಪು. ೮೭.

೧೪. ಅದೇ., ಪು. ೮೬.

೧೫. ಅದೇ., ಪು. ೮೮.

೧೬. ಅದೇ., ಪು. ೮೯.

೧೭. ಅದೇ., ಪು. ೩೩೨

೧೮. ಡಾ. ರಾಜಾನಂದಮೂರ್ತಿ ಬೋಧ್, ಬುದ್ಧಧರ್ಮೀಯರ ದಿನನಿತ್ಯದ ಪೂಜಾಪಾಠಗಳು, ಮೊದಲ ಮುದ್ರಣ (೨೦೧೦), ಬುದ್ಧ ಪ್ರತಿಷ್ಠಾನ ಪ್ರಕಾಶನ, ಬೆಂಗಳೂರು, ಪು. ೨.

೧೯. ದೇಜಗೌ, ಬಸವದರ್ಶನ, ಮೊದಲಮುದ್ರಣ (೨೦೦೪), ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಪು. ೨೯

೨೦. ಅದೇ., ಪು. ೭೩೬

೨೧. ಅದೇ., ಪು. ೭೩೭.

೨೨. ಬಂಗಾರಪ್ಪ ಹೊ.ನ.ಪುರ, ಮಾನವಧರ್ಮದ ಪ್ರತಿಪಾದಕರು, ಮೊದಲ ಮುದ್ರಣ (೨೦೦೪), ಚಿಂತನ ಪ್ರಕಾಶನ, ಹೊಳೇನರಸೀಪುರ, ಹಾಸನ ಜಿಲ್ಲೆ, ಪುಟ. ೭೧.

೨೩. ದೇಜಗೌ, ಬಸವದರ್ಶನ, ಮೊದಲ ಮುದ್ರಣ (೨೦೦೪), ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಪು. ೭೪೩.

೨೪. ಅದೇ., ಪು. ೭೪೫.

೨೫. ಅದೇ., ಪು. ೭೪೬.

೨೬. ಅದೇ., ಪು. ೭೪೯.

೨೭. ಅದೇ., ಪು. ೭೪೯.

೨೮. ಅದೇ., ಪು. ೭೪೮.

೨೯. ಅದೇ., ಪು. ೭೫೧.

೩೦. ಅದೇ., ಪು. ೭೫೫.

೩೧. ಅದೇ., ಪು. ೭೫೫–೭೫೬.

೩೨. ಅದೇ., ಪು. ೭೭೩.

೩೩. ಅದೇ., ಪು. ೭೭೩.

೩೪. ಅದೇ., ಪು. ೮೧೩.

೩೫. ಅದೇ., ಪು. ೮೧೩.

೩೬. ಅದೇ., ಪು. ೮೧೩.

೩೭. ಅದೇ., ಪು. ೭೮೯.

೩೮. ಅದೇ., ಪು. ೭೯೧.

೩೯. ಅದೇ., ಪು. ೭೯೬.

೪೦. ಅದೇ., ಪು. ೭೯೭.

೪೧. ಅದೇ., ಪು. ೮೧೫.

೪೨. ಅದೇ., ಪು. ೮೧೬.

೪೩. ಅದೇ., ಪು. ೮೧೭.

೪೪. ಎನ್.ಆರ್.ಶಿವರಾಂ, ಡಾ. ಅಂಬೇಡ್ಕರ್‌ರವರ ಪರಿನಿಬ್ಬಾಣ, ಮೊದಲಮುದ್ರಣ (೨೦೧೩), ಅಶೋಕ ಪಬ್ಲಿಕೇಷನ್ಸ್, ನಗರನಹಳ್ಳಿ, ಹೊಳೇನರಸೀಪುರ(ತಾ), ಹಾಸನ ಜಿಲ್ಲೆ, ಪು. ೩೨.

೪೫. ದೇಜಗೌ, ಬಸವದರ್ಶನ, ಮೊದಲ ಮುದ್ರಣ (೨೦೦೪), ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಪು. ೮೧೯.

೪೬. ಅದೇ., ಪು. ೭೫೨.

೪೭. ಅದೇ., ಪು. ೮೦೫.

೪೮. ಅದೇ., ಪು. ೮೦೬.

೪೯. ಅದೇ., ಪು. ೮೩೦.

೫೦. ಅದೇ., ಪು. ೮೩೪.

೫೧. ಅದೇ., ಪು. ೮೩೫.

೫೨. ಅದೇ., ಪು. ೮೩೫.

೫೩. ಅದೇ., ಪು. ೮೩೭.

೫೪. ಅದೇ., ಪು. ೮೪೦.

೫೫. ಅದೇ., ಪು. ೮೪೪.

೫೬. ಅದೇ., ಪು. ೮೪೨.

*****

# ಅಧ್ಯಾಯ - ೬

# ವಿಶ್ವ ಸಂಸ್ಕೃತಿಗೆ ವಚನಯುಗದ ಕೊಡುಗೆ

ಸಾಮಾಜಿಕವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ ಎಲ್ಲಾ ಕ್ಷೇತ್ರಗಳಲ್ಲಿಯೂ ಇಡೀ ಪ್ರಪಂಚವೇ ಕಂಡರಿಯದ ಚಳುವಳಿಯಾಗಿ ವಚನ ಚಳುವಳಿ ಕಂಡುಬರುತ್ತದೆ. ಇಡೀ ವಿಶ್ವಕ್ಕೆ ವಚನಸಾಹಿತ್ಯದ ಕೊಡುಗೆ ಅಪಾರ ಎಂದೇ ಹೇಳಬಹುದು. ವಚನಗಳು ಹೇಳದೇ ಇರುವ ವಿಷಯಗಳು ಯಾವುವು ಎಂಬುದನ್ನು ಹುಡುಕಬೇಕಾಗಿದೆ ಅಷ್ಟು ವಿಶಾಲವಾಗಿದೆ ಅದರ ವ್ಯಾಪ್ತಿ. ೧೨ನೆಯ ಶತಮಾನದಲ್ಲಿ ಕರ್ನಾಟಕದ ಒಂದು ಭಾಗದಲ್ಲಿ ನಡೆದ ಚಳುವಳಿ ವಿಶ್ವಮಟ್ಟದಲ್ಲಿ ಜಾಗೃತಿಗೆ ಕಾರಣವಾಗುತ್ತದೆಂದರೆ ಅದರ ಮಹತ್ವ ಅದ್ಭುತವಾದುದು. ಪ್ರಾಚೀನ ವೈದಿಕ ಸಾಹಿತ್ಯವನ್ನೇ ತಿದ್ದುವ, ಹಿಂದೂ ಧರ್ಮದಲ್ಲಿದ್ದ ನ್ಯೂನ್ಯತೆಗಳನ್ನು ಪ್ರಶ್ನಿಸುವ ಆತ್ಮಸ್ಥೈರ್ಯ ವಚನಕಾರರಲ್ಲಿತ್ತೆಂದರೆ ಅವರ ಧೈರ್ಯ ಅಸಮಾನವಾದುದೆ. ಯಾವುದೇ ಶಾಲೆಗೆ ಹೋಗದೆ, ಯಾವುದೇ ಪದವಿ ಪಡೆಯದೆ ಸರಾಗವಾಗಿ, ಅರ್ಥಗರ್ಭಿತವಾಗಿ ಸಾಹಿತ್ಯ ರಚಿಸುವುದರ ಮೂಲಕ ಧಾರ್ಮಿಕ, ಆರ್ಥಿಕ, ರಾಜಕೀಯ, ವೈಚಾರಿಕ ವಿಷಯಗಳನ್ನು ಚರ್ಚಿಸುತ್ತಿದ್ದರೆಂದರೆ ಅವರ ಪಾಂಡಿತ್ಯ ಅಪಾರವಾದುದು.

ದೇಜಗೌ ಅವರು ವಚನ ಸಾಹಿತ್ಯವನ್ನು ಎಲ್ಲಾ ನೆಲೆಗಳಲ್ಲಿಯೂ ಪರಿಚಯಿಸಿದ್ದಾರೆ. ಅದರ ಮಹತ್ವವನ್ನು ಸಾರಿದ್ದಾರೆ. ವಚನಗಳಲ್ಲಿ ಅಡಕವಾಗಿರುವ ಸಾಮಾಜಿಕತೆ, ಧಾರ್ಮಿಕತೆ, ರಾಜಕೀಯ, ಆರ್ಥಿಕ, ವೈಚಾರಿಕತೆ ಎಲ್ಲವನ್ನು ಕ್ರೂಢೀಕರಿಸಿ ವಿಶ್ವ ಸಂಸ್ಕೃತಿಗೆ ವಚನ ಸಾಹಿತ್ಯದ ಕೊಡುಗೆ ಏನೆಂಬುದನ್ನು ಅರ್ಥಮಾಡಿಸಿದ್ದಾರೆ. ಓದಿದಷ್ಟು ವಿಸ್ತಾರವಾಗುವ, ಸಂಶೋಧನೆ ಮಾಡಿದಷ್ಟು ಹೊಸ ಹೊಸ ಮಾಹಿತಿಗಳು ಹೊರಹಾಕುವ ವಚನ ಸಾಹಿತ್ಯ ಮಾದರಿಯಾದುದು.

ಮೊದಲಿಗೆ ದೇಜಗೌ ಅವರು ಸಂಸ್ಕೃತಿಯ ಅರ್ಥವನ್ನು ಅನಾವರಣಗೊಳಿಸುತ್ತಾರೆ. ವಿಶ್ವದಲ್ಲಿ ಚಾಲ್ತಿಯಲ್ಲಿರುವ ಅನೇಕ ಧರ್ಮಗಳ ಪ್ರಕಾರ ಸಂಸ್ಕೃತಿಯ ವ್ಯಾಖ್ಯಾನವನ್ನು ವಿವರಿಸುವುದರ ಮೂಲಕ ಇಡೀ ವಿಶ್ವಸಂಸ್ಕೃತಿಯ ಸಾರವನ್ನು ತಿಳಿಸುತ್ತಾರೆ. ವಚನಗಳಲ್ಲಿ ಸಂಸ್ಕೃತಿ ಹೇಗೆ ಅನಾವರಣಗೊಳ್ಳುತ್ತದೆ ಎಂಬುದನ್ನು ತಿಳಿಸಿಕೊಡುತ್ತಾರೆ.

ಹಿಂದೂ ಧರ್ಮದ ಪವಿತ್ರ ಗ್ರಂಥ ಭಗವದ್ಗೀತೆಯಲ್ಲಿ

ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ

ವೀತರಾಗ ಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ[೧]

ಭಗವದ್ಗೀತೆ ಹೇಳಿರುವ ಸುಸಂಸ್ಕೃತನ ಲಕ್ಷಣಗಳು

ಜಗತ್ತೊಂದು ಕುಟುಂಬವೆಂಬುದನ್ನು ಮರೆಯಬೇಡ

ಎಂಥ ಸಂದರ್ಭಗಳಲ್ಲಿಯೂ ಕೋಪಿಸಿಕೊಳ್ಳಬೇಡ ಮುಂತಾಗಿಷಿಂಟೋ ಧರ್ಮ ಮಾನವನಿಗೆ ವಿಧಿಸಿರುವ ಕರ್ತವ್ಯಗಳು,

- ಭೌತಿಕ ಶ್ರೀಮಂತಿಕೆಗಿಂತ ಬೌದ್ಧಿಕ ಶ್ರೀಮಂತಿಕೆ ಅತ್ಯುತ್ಕೃಷ್ಟವಾದುದು – ಇದು ಜೊರಾಸ್ಟ್ರಿಯನ್ ಧರ್ಮದ ತತ್ವ
- ತ್ಯಾಗದಿಂದ ಆತ್ಮ ಕಲ್ಯಾಣ ಮಾತ್ರವಲ್ಲ, ಜಗತ್ತಿನ ಹಿತಸಾಧನೆ ಸಾಧ್ಯ – ಬುದ್ಧನ ತತ್ವ
- ಶುದ್ಧ ನಿರ್ವ್ಯಾಜಪ್ರೇಮ, ಶತ್ರುವನ್ನು ಪ್ರೀತಿಸಬೇಕೆಂಬುದು –ಯೇಸುವಿನ ತತ್ವ
- ದುಡಿಮೆಯಿಂದ ಬದುಕು ಸಾಗಿಸಬೇಕು, ಸರಳ ಜೀವನ ನಡೆಸಬೇಕು – ಪ್ರವಾದಿ ಮಹಮ್ಮದ್ ಅವರ ತತ್ವ

ಹೀಗೆ ದೇಜಗೌ ಅವರು ಹಲವಾರು ಸಂತರ ಸಂಸ್ಕೃತಿಯ ವ್ಯಾಖ್ಯಾನವನ್ನು ನೀಡುವುದರೊಂದಿಗೆ ಸಂಸ್ಕೃತಿಯ ಕಲ್ಪನೆಯನ್ನು ಮೂಡಿಸಿದ್ದಾರೆ. ವ್ಯಾಖ್ಯಾನಗಳಲ್ಲಿ ಭಿನ್ನತೆ ಕಂಡುಬಂದರೂ ಸಾರ ಒಂದೇ. ಶಾಂತಿ, ಜ್ಞಾನ, ಸಮಾನತೆ ಮೂಡಿಸುವುದು. "ಸಂಸ್ಕಾರದಿಂದ ಸಂಸ್ಕೃತಿ. ಸಂಸ್ಕಾರ ಶಬ್ದದ ಅರ್ಥ ಅನೇಕ, ಪರಿಪೂರ್ಣತೆ, ಸುಪರಿಪಾಕ, ಅಲಂಕರಣ, ಮಾನಸಿಕ ಶಿಕ್ಷಣ, ಶುದ್ಧೀಕರಣ, ಭಾವನೆ, ಕಲ್ಪನೆ, ಸಾಮರ್ಥ್ಯ, ಸ್ವಯಂಸೃಜನ ಶಕ್ತಿ, ಸ್ಮೃತಿ ಶಕ್ತಿ ಇತ್ಯಾದಿ. ಈ ಅರ್ಥಗಳನ್ನು ಪರಿಶೀಲಿಸಿದಾಗ ಅದು ಮುಖ್ಯವಾಗಿ ಮಾನಸಿಕ ಕ್ರಿಯೆಗಳನ್ನು ಸೂಚಿಸುವ ಪದವೆಂದು ವೇದ್ಯವಾಗುತ್ತದೆ."[೨]

ದೇಜಗೌ ಅವರ ಅಭಿಪ್ರಾಯದಲ್ಲಿ ಸಂಸ್ಕೃತಿಯ ಅರ್ಥ ಹೀಗೆ ಮೂಡಿ ಬಂದಿದೆ. ಸಂಸ್ಕೃತಿಯು ಮನುಷ್ಯನ ನಡವಳಿಕೆ, ಮಾನಸಿಕ ವಿಷಯಕ್ಕೆ ಸಂಬಂಧಿಸಿದ್ದು ಎಂಬ ವಿಚಾರ ತಿಳಿಯುತ್ತದೆ. ಸಂಸ್ಕೃತಿಯು ಕಾಲದೇಶಾತೀತವಾಗಿರುವಂತೆ ದೇಶಕಾಲಬದ್ಧವೂ ಆಗಿರುತ್ತದೆ. ಸಂಸ್ಕೃತಿಯ ಬಾಹ್ಯ ಸ್ವರೂಪಗಳು ಬೇರೆಯಾದರೂ

ಅದರ ಉದ್ದೇಶ ಒಂದೇ ಆಗಿರುತ್ತದೆ. ಅರಿಷಡ್ವರ್ಗಗಳು ಮಾನವನ ಅವನತಿಗೆ ಹೇಗೆ ಕಾರಣವಾಗುತ್ತವೆಯೋ ಪ್ರೀತಿ, ಅಹಿಂಸೆ, ತಾಳ್ಮೆ, ಸಮಾಧಾನಗಳು ಮಾನವನ ಆಂತರಂಗಿಕ ವಿಕಾಸಕ್ಕೆ ಕಾರಣವಾಗುತ್ತವೆ. ಇವುಗಳನ್ನೆಲ್ಲಾ ಬೋಧಿಸುವ ಸಂಸ್ಕೃತಿಯೇ ವಿಶ್ವಸಂಸ್ಕೃತಿಯಾಗುತ್ತದೆ ಎಂಬುದು ದೇಜಗೌ ಅವರ ಅಭಿಪ್ರಾಯವಾಗಿದೆ.

ಪ್ರಪಂಚದಲ್ಲಿ ಅಸ್ಥಿತ್ವದಲ್ಲಿರುವ ಹಲವಾರು ಧರ್ಮಗಳು ಕೋಟ್ಯಾಂತರ ಸಂಖ್ಯೆಯ ಅನುಯಾಯಿಗಳು ಆ ಧರ್ಮದ ತತ್ವಕ್ಕೆ ತಕ್ಕಂತೆ ತಮ್ಮ ಜೀವನ ಶೈಲಿಯನ್ನು, ಸಂಸ್ಕೃತಿಯನ್ನು ರೂಢಿಸಿಕೊಂಡಿರುತ್ತಾರೆ. ಪ್ರಪಂಚದ ಅನೇಕ ರಾಷ್ಟ್ರಗಳಲ್ಲಿ ಒಂದೇ ಧರ್ಮ ಅಸ್ಥಿತ್ವದಲ್ಲಿರುವುದು ಕಂಡುಬರುತ್ತದೆ. ಆದರೆ ಭಾರತ ಇಡೀ ಪ್ರಪಂಚದಲ್ಲಿಯೇ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಹಲವಾರು ಧರ್ಮ, ಜಾತಿ, ಸಂಪ್ರದಾಯಗಳು ಭಾರತದಲ್ಲಿವೆ. ಅದು ವೇಷಭೂಷಣ, ಭಾಷೆಗಳಲ್ಲಿ ವ್ಯಕ್ತವಾಗುತ್ತದೆ. ವಿವಿಧತೆಯಲ್ಲಿ ಏಕತೆಯನ್ನು ಸಾಧಿಸಿದ ರಾಷ್ಟ್ರ ಭಾರತವಾಗಿದೆ.

'ವೀ' ಎಂಬ ಪದಕ್ಕೆ ಜೀವಾತ್ಮ ಪರಮಾತ್ಮಗಳ ಐಕ್ಯಕ್ಕೆ ನೆರವಾಗುವ ವಿದ್ಯೆ ಎನ್ನುವ ಅರ್ಥವಿದೆಯೆಂದು ವಿದ್ವಾಂಸರು ಸೂಚಿಸುತ್ತಾರೆ. 'ವೀ' ಎನ್ನುವ ಪದಕ್ಕೆ ಚಲಿಸು, ಸೇರು, ವ್ಯಾಪಿಸು, ಸಂಪಾದಿಸು, ಹುಟ್ಟು, ಹೊಳೆ, ಬೇರೆಯಾಗು, ಬದಲಾಗು, ದಾಟು ಮೊದಲಾದ ಇನ್ನೂ ಹಲವು ಅರ್ಥಗಳಿವೆ. 'ವೀರ' ಗುಣವಾಚಕವಾದಾಗ ಬಲವಂತವಾದ, ಧೈರ್ಯವುಳ್ಳ, ಪರಮಶ್ರೇಷ್ಠವಾದ ಎಂಬ ಅರ್ಥಗಳನ್ನೂ, ನಾಮ ಪದವಾದಾಗ ರಕ್ಷಕ, ಪಾತ್ರಧಾರಿ, ಅಗ್ನಿ, ಪತಿ, ವಿಷ್ಣು, ಮೊದಲಾದ ಅರ್ಥಗಳನ್ನು ಸೂಚಿಸುತ್ತವೆ. ಪ್ರತ್ಯೇಕವಾದ ಮತ್ತು ಶ್ರೇಷ್ಠವಾದ ಎಂಬ ಅರ್ಥಗಳನ್ನು ಅಂಗೀಕರಿಸಿದರೆ ವೀರಶೈವದ ಕಲ್ಪನೆ ಸ್ಪಷ್ಟವಾಗುತ್ತದೆಂದು ಹೇಳಬಹುದು.[೩]

ಎಷ್ಟು ವಿಶಾಲವಾದ ಅರ್ಥವ್ಯಾಪ್ತಿಯನ್ನು ದೇಜಗೌ ಅವರು ಕೊಟ್ಟಿದ್ದಾರೆ. ಹೆಸರಿನಲ್ಲಿಯೇ ವೈಶಾಲ್ಯತೆಯನ್ನು ಹೊಂದಿದ ಧರ್ಮವಾಗಿದೆ. ವೀರಶೈವ ಧರ್ಮವು ಕೂಡ ಆಗಮ ವೇದೋಪನಿಷತ್ತುಗಳ ಪ್ರಭಾವಕ್ಕೆ ಒಳಗಾಗಿದೆ ಎಂಬ ಅಂಶವನ್ನು ಸ್ಪಷ್ಟಪಡಿಸಿದ್ದಾರೆ. ಪ್ರಾಚೀನ ಧರ್ಮಗಳಾದ ಜೈನ, ಬೌದ್ಧ ಧರ್ಮಗಳು ತಮ್ಮದೇ ಆದ ಪ್ರಭಾವ ಬೀರಿವೆ. ಅಹಿಂಸೆ, ಸಮಾನತೆಯನ್ನೇ ಬೋಧಿಸಿದ ಈ ಧರ್ಮಗಳು ಕಾಲಾನಂತರದಲ್ಲಿ ತಮ್ಮ ಪ್ರಭಾವವನ್ನು ಕಳೆದುಕೊಳ್ಳುತ್ತಾ ಬಂದವು. ಇದಕ್ಕೆ ಅನೇಕ ಕಾರಣಗಳಿರಬಹುದು.

೧೨ನೆಯ ಶತಮಾನದಲ್ಲಿ ಆರಂಭವಾದ ವಚನ ಚಳುವಳಿ ತನ್ನದೇ ಆದ ವಿಶಿಷ್ಟತೆಯಿಂದ ಚಳುವಳಿ ಆರಂಭಿಸಿತು. ಮಾನವ ಸಂಸ್ಕೃತಿಯ ಎಲ್ಲಾ ತತ್ವಗಳು ಅದರಲ್ಲಿ ಅಡಕವಾಗಿದ್ದವು. ಮಾನವತಾವಾದಿ, ಕ್ರಾಂತಿಕಾರಿ ಬಸವಣ್ಣ ಆರಂಭಿಸಿದ ವೀರಶೈವಧರ್ಮವೇ ಒಂದು ಅದ್ಭುತವಾದ ಸಾಧನೆ ಎಂಬುದು ದೇಜಗೌ ಅವರ ಅಭಿಪ್ರಾಯವಾಗಿದೆ. ಪ್ರತಿಯೊಬ್ಬರೂ ಒಪ್ಪಲೇ ಬೇಕಾದ ಅಭಿಪ್ರಾಯವಾಗಿದೆ. 'ವೀರಶೈವ' ಎಂಬ ಪದದ ನಿಷ್ಪತ್ತಿಯನ್ನು ದೇಜಗೌ ಅವರು ಹೀಗೆ ಅರ್ಥಮಾಡಿಸಿದ್ದಾರೆ. ವಚನಸಾಹಿತ್ಯವು ವಿಶ್ವಸಂಸ್ಕೃತಿಗೆ ನೀಡಿರುವ ಕೊಡುಗೆಗಳನ್ನು ಮಹತ್ವದ ವಿಷಯಗಳನ್ನು ತಿಳಿಸುವುದರ ಮೂಲಕ ದೇಜಗೌ ಅವರು ಸ್ಪಷ್ಟಪಡಿಸಿದ್ದಾರೆ.

**ವಿಶ್ವ ಸಂತ ಪರಂಪರೆ:**

ಯೇಸು, ಬುದ್ಧ, ಪೈಗಂಬರ್ ಮೊದಲಾದ ಸಂತರು ವಿಶ್ವದಲ್ಲಿ ಮೊದಲ ಸ್ಥಾನದಲ್ಲಿ ನಿಲ್ಲುತ್ತಾರೆ. ಸಮಾಜ ದಾರಿತಪ್ಪುತ್ತಿರುವಾಗ ಸುಧಾರಣೆಯ ಸಲುವಾಗಿ ಆಯಾ ಕಾಲಘಟ್ಟದಲ್ಲಿ ಒಬ್ಬೊಬ್ಬ ಸಂತ ಜನ್ಮ ತಾಳಿದ್ದಾನೆ. ಸಮಾಜ ಸುಧಾರಣೆಗಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟವರು. ಅನೇಕ ನೋವು, ಹಿಂಸೆ, ಅವಮಾನಗಳನ್ನು ಸಹಿಸಿ ಶ್ರೇಷ್ಠ ಮಟ್ಟಕ್ಕೆ ಏರಿದವರು. ಒಬ್ಬೊಬ್ಬರ ಹಿನ್ನೆಲೆಯೂ ವ್ಯತ್ಯಾಸ ಹೊಂದಿದ್ದರೂ ಬೋಧಿಸಿದ ತತ್ವಗಳು ಮಾತ್ರ ಒಂದೇ. ಇವರಲ್ಲೆಲ್ಲಾ ೧೨ನೆಯ ಶತಮಾನದ ವಚನಕಾರರು ಶ್ರೇಷ್ಠ ಮಟ್ಟದಲ್ಲಿ ನಿಲ್ಲುತ್ತಾರೆ. ಅವರ ತ್ಯಾಗ, ನೈತಿಕತೆ ಇಡೀ ವಿಶ್ವಕ್ಕೆ ಮಾದರಿ. ಜೇಡರ ದಾಸಿಮಯ್ಯ, ಬಸವಣ್ಣ, ಅಲ್ಲಮಪ್ರಭು, ಚನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದ ಶ್ರೇಷ್ಠ ವಚನಕಾರರು ಜಗತ್ತಿನ ಯಾವ ಸಂತನಿಗೂ ಕಡಿಮೆಯಿಲ್ಲ ಎಂಬುದನ್ನು ವಚನ ರಚನೆಯ ಮೂಲಕ ಸಾಬೀತುಪಡಿಸಿದ್ದಾರೆ.

ಇತಿಹಾಸದಲ್ಲಿ ಕಂಡುಬರುವ ನೆಪೋಲಿಯನ್, ಹಿಟ್ಲರ್, ಅಲೆಕ್ಸಾಂಡರ್ ಮೊದಲಾದ ಚಕ್ರವರ್ತಿಗಳು ನಿಜವಾದ ಇತಿಹಾಸ ನಿರ್ಮಾಪಕರಲ್ಲ. ಅವರ ಹೃದಯ ಮಾನವೀಯತೆಗಾಗಿ ಮಿಡಿಯಲಿಲ್ಲ. ಇದ್ದ, ಗೆದ್ದ, ಸತ್ತ ಎಂಬಂತೆ ಅವರ ಜೀವನ ಕೊನೆಗೊಳ್ಳುತ್ತದೆ. "ಆದರೆ ಬುದ್ಧ, ಯೇಸು, ಬಸವೇಶ್ವರರು ಎಂದೆಂದಿಗೂ ಸಾಯುವುದಿಲ್ಲ. ಅವರಿರುವ ತನಕ ಲೋಕಕ್ಕೆ ಭಯವಿಲ್ಲ. ಅಶೋಕನೂ ಅಷ್ಟೇ. ಅವರೇ ಸಂಸ್ಕೃತಿಯ ಅಧ್ವರ್ಯುಗಳು, ಇತಿಹಾಸ ನಿರ್ಮಾಪಕರು"[9] ಎಂಬ ಅಭಿಪ್ರಾಯದೊಂದಿಗೆ ದೇಜಗೌ ಅವರು ಬಸವಣ್ಣನವರನ್ನು ಭಾರತೀಯ ಸಾಂಸ್ಕೃತಿಕ ನಾಯಕರಾಗಿ ಗುರುತಿಸಿದ್ದಾರೆ.

ಬಸವಣ್ಣ ಹಾಗೂ ಅಕ್ಕಮಹಾದೇವಿಯರ ಕೊಡುಗೆಯನ್ನು ದೇಜಗೌ ಅವರು ಸ್ಮರಿಸಿದ್ದಾರೆ. ಬೇರೆ ವಚನಕಾರರ ಕೊಡುಗೆಯು ಕಡಿಮೆಯೇನಿಲ್ಲ. ವಿಶ್ವದಲ್ಲಿ ಕಂಡುಬರುವ ಶ್ರೇಷ್ಠ ಗ್ರಂಥಗಳಿಗಿಂತ ಕಡಿಮೆಯೇನಿಲ್ಲ ಎಂಬುದನ್ನು ವಚನಗಳು ತೋರಿಸಿಕೊಟ್ಟಿವೆ. ಸಂತ ಅಗಸ್ಟಿನ್‌ನನ್ನು ಕಂಡಿರದಿದ್ದ ಬಸವಣ್ಣ ಅವರಿಗಿಂತ ಶ್ರೇಷ್ಠವಾಗಿ ವಚನ ರಚನೆ ಮಾಡಿದ್ದಾರೆ. ಒಂದೊಂದು ವಚನಗಳಲ್ಲಿಯೂ ಅವರ ವ್ಯಕ್ತಿತ್ವವೇ ಅನಾವರಣಗೊಳ್ಳುತ್ತದೆ. ಸಮಾಜ ಸುಧಾರಕರಾಗಿ, ಮಹಾನ್ ಮಾನವತಾವಾದಿಯಾಗಿ, ರಾಜಕೀಯ ತಜ್ಞನಾಗಿ, ಅರ್ಥಶಾಸ್ತ್ರಜ್ಞನಾಗಿ, ಮನೋವಿಜ್ಞಾನಿಯಾಗಿ ಬಸವಣ್ಣ ಕಂಡುಬರುತ್ತಾರೆ. ಬಸವಣ್ಣನವರ ವಚನಗಳಲ್ಲಿ ಧರ್ಮ, ಅರ್ಥ, ಕಾಮಮೋಕ್ಷಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳು ಚರ್ಚಿತವಾಗಿವೆ. ಲೌಕಿಕ, ಅಲೌಕಿಕ ಚಿಂತನೆಗಳಿವೆ. “ಮಾನವನ ದೌರ್ಬಲ್ಯ ಜಯವೇ ಸಜ್ಜನಿಕೆಯ ಮೊದಲ ಹೆಜ್ಜೆ, ಸುಸಂಸ್ಕೃತಿಯ ಪ್ರಾರಂಭ, ಸತ್ಯ ಸಾಕ್ಷಾತ್ಕಾರದ ತಳಹದಿ, ಬಸವೇಶ್ವರರ ಜೀವನ ಚರಿತ್ರೆಯನ್ನು ಅವರ ಸಮಕಾಲೀನರಾರೂ ಬರೆದಿಲ್ಲ. ಆದರೆ ಆ ಸಮಕಾಲೀನರ ಸ್ತುತಿರೂಪದ ವಚನಗಳು ಅವರ ಮಹಾ ವ್ಯಕ್ತಿತ್ವಕ್ಕೆ ಹಿಡಿದಿರುವ ದರ್ಪಣಗಳಾಗಿವೆ.[೫] ನುಡಿದಂತೆ ನಡೆದವರು ಬಸವಣ್ಣನವರು. ತುಂಬಾ ಸರಳವಾಗಿ ಮನುಷ್ಯನ ನಡವಳಿಕೆಯ ಬಗ್ಗೆ ತಿಳಿಸುತ್ತಾರೆ. “ಎನ್ನ ತಪ್ಪು ಅನಂತ ಕೋಟಿ, ನಿಮ್ಮ ಸೈರಣೆಗೆ ಲೆಕ್ಕವಿಲ್ಲಾ”[೬] ಎಂದು ಹೇಳುವ ಬಸವಣ್ಣನವರ ನೇರ ಗುಣವನ್ನು ದೇಜಗೌ ಅವರು ತಿಳಿಸುತ್ತಾರೆ. ಏನೂ ತಪ್ಪು ಮಾಡದೆ, ತಪ್ಪನ್ನು ಒಪ್ಪಿಕೊಳ್ಳುವ, ಪಶ್ಚಾತ್ತಾಪ ಪಡುವ ಗುಣ ಬಸವಣ್ಣನವರಿಗಿತ್ತು. ಆದರೆ ಘೋರ ಅಪರಾಧ ಮಾಡಿದ್ದರೂ ಒಪ್ಪಿಕೊಳ್ಳದ ಇಂದಿನ ಜನರಿಗೆ ಬಸವಣ್ಣನವರ ಗುಣವನ್ನು ಕಲಿಯುವ ಅಗತ್ಯತೆ ಇದ್ದೇ ಇದೆ.

ಭಕ್ತನಾದವನಿಗೆ ಅಂತರಂಗಶುದ್ಧಿ, ಬಹಿರಂಗಶುದ್ಧಿ ಮುಖ್ಯ ಎಂದು ಸಾರಿದರು. ಅದಿಲ್ಲದಿದ್ದರೆ ಶಿವನು ಒಲಿಯುವುದಿಲ್ಲ ಎಂದು ಹೇಳುತ್ತಾರೆ.

ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ,
ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ
ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ
ನಿಮ್ಮ ಶರಣರ ಪಾದಕೆ ತೊಡಿಗೆಯ ಮಾಡಿ ಸಲಹಯ್ಯ[೭]

ಮನುಷ್ಯ ತನ್ನನ್ನು ತಾನು ಅರಿಯಬೇಕು. ಅದಕ್ಕಾಗಿ ಸಾಧನೆ ಮಾಡಬೇಕೆಂಬುದು ಬಸವಣ್ಣನವರ ನಂಬಿಕೆ. ಭಗವಂತನ ಮುಂದೆ ಅವರ

ನಿವೇದನೆಯು ಅವರ ನಿಷ್ಕಪಟ ಹೃದಯವನ್ನು ತೋರಿಸುತ್ತದೆ. ತನ್ನನ್ನು ತಾನು ಎಷ್ಟು ಪರೀಕ್ಷೆಗೆ ಒಳಪಡಿಸಿಕೊಳ್ಳುತ್ತಾರೆ ಎಂಬ ಅಂಶ ತಿಳಿದುಬರುತ್ತದೆ. ಸಾಧನೆ, ಸಿದ್ಧಿ ಪಡೆಯುವುದು ಅಷ್ಟು ಸುಲಭವಲ್ಲ ಎಂಬುದು ಇದರಿಂದ ತಿಳಿದುಬರುತ್ತದೆ.

ಕಾಯವಿಕಾರ ಕಾಡಿಹುದಯ್ಯಾ
ಮನೋವಿಕಾರ ಕೂಡಿಹುದಯ್ಯಾ
ಇಂದ್ರಿಯ ವಿಕಾರ ಸುಳಿವುದಯ್ಯಾ
ಸುಳಿವಿನೊಡನೆ ಸುಳಿವುತ್ತಲಿದ್ದೇನೆ, ಸಿಲುಕಿಸದಿರಯ್ಯ
ಅನ್ಯಚಿತ್ತವಿರಿಸದಿರಯ್ಯಾ, ನಿಮ್ಮ ಚಿತ್ತವಿರಿಸಯ್ಯಾ[೮]

ಇಂದ್ರಿಯ ನಿಗ್ರಹ ಅಷ್ಟು ಸುಲಭವಲ್ಲ, ಒಬ್ಬ ಸಂತನಾದವನಿಗೆ ಇಂದ್ರಿಯ ನಿಗ್ರಹ ಮಾಡುವ ಶಕ್ತಿ ಎಷ್ಟು ಮುಖ್ಯ ಅದಕ್ಕಾಗಿ ಬಸವಣ್ಣನವರ ಬೇಡಿಕೆಯು ವ್ಯಕ್ತವಾಗಿದೆ. ಆದರೆ ಇಂದಿನ ಮಠಾಧೀಶರ ವರ್ತನೆ ಇದಕ್ಕೆ ತದ್ವಿರುದ್ಧವಾಗಿದೆ. ಇದು ನಾಚಿಕೆಗೇಡಿನ ಸಂಗತಿಯಾಗಿದೆ. ತನ್ನನ್ನು ತಾನು ನಿಯಂತ್ರಣಕ್ಕೆ ತಂದುಕೊಳ್ಳಲು ಬಸವಣ್ಣನವರು ಸಂಗಮನಾಥನಿಗೆ ಮೊರೆಯಿಡುತ್ತಾರೆ.

ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ
ನಿಮ್ಮ ಶರಣರ ಪಾದವಲ್ಲದೆ
ಅನ್ಯವಿಷಯಕ್ಕೆಳಸದಂತೆ ಇರಿಸು, ಕೂಡಲ ಸಂಗಮದೇವಾ[೯]

ದೇಜಗೌ ಅವರು ಈ ವಚನದ ಮೂಲಕ ಆಧುನಿಕ ಕಾಲದ ಮತ್ತೊಬ್ಬ ಮಹಾನ್ ಪುರುಷ ಗಾಂಧೀಜಿಯವರನ್ನು ಸ್ಮರಿಸಿದ್ದಾರೆ. ಅವರಲ್ಲಿಯೂ ಇದ್ದ ನೈತಿಕತೆಯ ದರ್ಶನ ಮಾಡಿಸಿದ್ದಾರೆ. ಗಾಂಧೀಜಿಯವರ ಬಳಿ ಇದ್ದ ಮೂರು ಮಂಗಗಳ ಪ್ರತಿಮೆಯು ಇದನ್ನೇ ಸೂಚಿಸುತ್ತದೆ ಎಂಬುದನ್ನು ನೆನಪಿಸುತ್ತಾರೆ.

ವಿಶ್ವಸಂಸ್ಕೃತಿಗೆ ಬಸವಣ್ಣನವರ ಕಾಣಿಕೆಯನ್ನು ಸ್ಮರಿಸಿದ ದೇಜಗೌ ಅವರು ವಚನಯುಗದ ಅದ್ಭುತ ಮಹಿಳೆ ಅಕ್ಕಮಹಾದೇವಿಯ ಸಾಧನೆಗಳನ್ನು ಸಂಸ್ಕೃತಿಯ ನೆಲೆಯಲ್ಲಿ ಪರಿಚಯಿಸಿದ್ದಾರೆ. ಸ್ತ್ರೀ ಸಂತರಲ್ಲಿ ಅಗ್ರಸ್ಥಾನದಲ್ಲಿ ಗುರುತಿಸಿದ್ದಾರೆ. "ಅರಮನೆ, ಐಸಿರಿ, ರಾಣಿತನ, ಭೋಗ ವೈಭೋಗಗಳ ರೂಪದಲ್ಲಿ ತನ್ನನ್ನು ವಿಭ್ರಮಗೊಳಿಸಿದ ಸೈತಾನಶಕ್ತಿಯನ್ನು ಗೆದ್ದು, ಅಂಗದ ಮೋಹವನ್ನು ತ್ಯಜಿಸಿ, ಲಿಂಗ

ಸಾಕ್ಷಾತ್ಕಾರವನ್ನು ಬಯಸಿ, ಕೇಶಾಂಬರಿಯಾಗಿಯೇ ಅನುಭವ ಮಂಟಪವನ್ನು ಹೊಕ್ಕು, ಸರ್ವ ಶರಣರ ಗೌರವಾದರಗಳಿಗೆ ಪಾತ್ರಳಾಗಿ, ಕೊನೆಗೆ ಶ್ರೀಶೈಲದ ಕದಳಿ ವನದಲ್ಲಿ ಚೆನ್ನಮಲ್ಲಿಕಾರ್ಜುನನ ಸಾಕ್ಷಾತ್ಕಾರ ಪಡೆಯುತ್ತಾಳೆ.[೧೦] ಈ ಅಭಿಪ್ರಾಯದಲ್ಲಿಯೇ ಅಕ್ಕಮಹಾದೇವಿಯ ವ್ಯಕ್ತಿತ್ವ ಅಡಗಿದೆ. ತನ್ನ ಲೌಕಿಕ ಬದುಕನ್ನು ತ್ಯಜಿಸಿ ಆತ್ಮ ಸಂಗಾತಿ ಚೆನ್ನಮಲ್ಲಿಕಾರ್ಜುನನನ್ನು ಹುಡುಕಿಕೊಂಡು ಹೋಗುವ ಅವಳ ದಿಟ್ಟತನ ಸ್ಫೂರ್ತಿಯಾದುದಾಗಿದೆ. ಅವಳ ಧೈರ್ಯ ಇಡೀ ಸ್ತ್ರೀ ಕುಲಕ್ಕೆ ಮಾದರಿಯಾಗಿದೆ.

ಚಿಲಿಮಿಲಿಯೆಂದೋದುವಗಿಳಿಗಳಿಕಾ। ನೀವು ಕಾಣಿರೆ, ನೀವು ಕಾಣಿರೆ?
ಸರವೆತ್ತಿ ಪಾಡುವ ಕೋಗಿಲೆಗಳಿರಾ। ನೀವು ಕಾಣಿರೆ, ನೀವು ಕಾಣಿರೆ
ಎರರಾ ಬಂದಾಡುವ ತುಂಬಿಗಳಿರಾ। ನೀವು ಕಾಣಿರೆ, ನೀವು ಕಾಣಿರೆ?
ಕೊಳಗ ತಡಿಯೊಳಾಡುವ ಹಂಸಗಳಿರಾ। ನೀವು ಕಾಣಿರೆ, ನೀವು ಕಾಣಿರೆ?
ಗಿರಿಗಹ್ವರದೊಳಾಡುವ ನವಿಲುಗಳಿರಾ। ನೀವು ಕಾಣಿರೆ, ನೀವು ಕಾಣಿರೆ?
ಚೆನ್ನಮಲ್ಲಿಕಾರ್ಜುನನೆಲ್ಲಿರ್ದಿಹನೆಂದು ನೀವು ಹೇಳಿರೆ?[೧೧]

ನಿಸರ್ಗಶಕ್ತಿಯಲ್ಲಿ ಚೆನ್ನಮಲ್ಲಿಕಾರ್ಜುನನ್ನು ಕಾಣಲು ಬಯಸುತ್ತಾಳೆ, ಅವಳ ಸ್ಥಿರಪ್ರಜ್ಞೆಗೆ ಇದೊಂದು ಸ್ಪಷ್ಟ ನಿದರ್ಶನವಾಗಿದೆ. ಅವಳ ಸಾಹಸಕ್ಕೆ, ಅವಳ ಇಂದ್ರಿಯ ದಿಗ್ವಿಜಯಕ್ಕೆ ಅವಳ ಬದುಕೇ ಸಾಕ್ಷಿಯಾಗಿದೆ.

ಬಸವಣ್ಣನವರಂತೆ ಇವಳ ಸಾಧನೆಯು ವಿಶ್ವಮಟ್ಟದಲ್ಲಿದೆ. ಇವಳ ಹೋರಾಟ ಮೆಚ್ಚಬಹುದಾಗಿದೆ ಇಂದ್ರಿಯ ನಿಗ್ರಹಶಕ್ತಿಗೆ ಬಸವಣ್ಣನವರ ವಚನಗಳ ಪ್ರಭಾವ ಅವಳ ಮೇಲೆ ಅಚ್ಚಳಿಯದೆ ಉಳಿದಿದೆ.

**ಪುರೋಹಿತ ಶಾಹಿಯ ವಿನಾಶ:**

ವೈದಿಕ ಪರಂಪರೆಯನ್ನು ವಿರೋಧಿಸುವ ನೈತಿಕ ಶಕ್ತಿ ವಚನಕಾರರಿಗಿತ್ತು. ಪುರೋಹಿತ ಶಾಹಿ ವ್ಯವಸ್ಥೆಯಲ್ಲಿದ್ದ ಸಾಮಾಜಿಕ ಅಸಮಾನತೆಯನ್ನು ಬುದ್ಧನಂತೆ ಬಸವಣ್ಣ ಮೊದಲಾದ ವಚನಕಾರರು ವಿರೋಧಿಸಿದರು. "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ"[೧೨] ಪುರೋಹಿತಶಾಹಿ ಪದ್ಧತಿಗೆ ವಿರುದ್ಧವಾಗಿ ಇಷ್ಟಲಿಂಗ ದೈವ ಆರಾಧನೆಯನ್ನು ವಚನಕಾರರು ಬೆಂಬಲಿಸಿದರು.

ಕಲ್ಲಮನೆಯ ಮಾಡಿ, ಕಲ್ಲದೇವರ ಮಾಡಿ
ಆ ಕಲ್ಲು ಮೇಲೆ ಕೆಡದರೆ ದೇವರತ್ತ ಹೋದರೋ।
ಲಿಂಗಪ್ರತಿಷ್ಠೆಯ ಮಾಡಿದವರಿಗೆ ನಾಯಕ ನರಕ ಗುಹೇಶ್ವರ

ದೇಹದೊಳಗೆ ದೇಗುಲವಿರಲು ಬೇಜಿ ಮತ್ತೆ ದೇವಾಲಯವೇಕಯ್ಯಾ?
ಹೇಳಲಿಲ್ಲ, ಕೇಳಲಿಲ್ಲ, ಗೊಹೇಶ್ವರ ನೀನು ಕಲ್ಲಾದರೆ ನಾನೇನಪ್ಪೆನು?[೧೩]

ಪ್ರಭುದೇವರು ಕೂಡ ಬಸವಣ್ಣನವರ ಮಾರ್ಗವನ್ನೇ ಅನುಸರಿಸಿದವರು. ದೇವಾಲಯ ವ್ಯವಸ್ಥೆಯನ್ನು ನಿರಾಕರಿಸಿದ್ದು ವಚನಕಾರರ ಹೆಗ್ಗಳಿಕೆಯಾಗಿದೆ. ಪ್ರಭುದೇವ ಮತ್ತು ಬಸವೇಶ್ವರರ ನೇತೃತ್ವದಲ್ಲಿ ಸ್ಥಾಪನೆಯಾದ ಅನುಭವ ಮಂಟಪ ಇಡೀ ವಿಶ್ವದಲ್ಲಿಯೇ ಇಲ್ಲ ಇದೊಂದು ವಿಶ್ವಸಂಸ್ಕೃತಿಗೆ ವೀರಶೈವ ಧರ್ಮದ ಅದ್ಭುತ ಕೊಡುಗೆಯಾಗಿದೆ.

**ವಿಶ್ವಸಂಸ್ಕೃತಿಯಲ್ಲಿ ಕಾಣದ ಸ್ತ್ರೀ ಸ್ವಾತಂತ್ರ್ಯ:**

ಪ್ರಪಂಚದ ಯಾವುದೇ ಧರ್ಮವೂ ಸ್ತ್ರೀಗೆ ಸ್ವಾತಂತ್ರ್ಯ ನೀಡಿರಲಿಲ್ಲ. ಮನುವಿನ ಕಾಲದಿಂದಲೂ ಸ್ತ್ರೀ ಸ್ವಾತಂತ್ರ್ಯಕ್ಕೆ ಅನರ್ಹಳು ಎಂದೇ ಬಿಂಬಿಸಲಾಗಿತ್ತು. ಆದರೆ ಈ ವಿಷಯದಲ್ಲಿ ವಚನಯುಗ ಅಂತರಾಷ್ಟ್ರೀಯ ಮಟ್ಟದಲ್ಲಿ ಆದರ್ಶಸ್ಥಾನದಲ್ಲಿ ನಿಂತಿದೆ ಎಂಬುದನ್ನು ದೇಜಗೌ ಅವರು ಮನಗಾಣಿಸಿದ್ದಾರೆ. ಸ್ತ್ರೀಯರನ್ನು ಶೂದ್ರರೆಂದು ತಿಳಿದಿದ್ದ ಸಂತರ ಅಭಿಪ್ರಾಯಕ್ಕೆ ವಚನಕಾರರು ಸರಿಯಾದ ಉತ್ತರ ನೀಡಿದರು. ಸ್ತ್ರೀಯರ ಮಹತ್ವ ಸಾರಿದರು. ಸಾಮಾಜಿಕ, ಧಾರ್ಮಿಕ, ಆರ್ಥಿಕ, ವೈಚಾರಿಕ ಸ್ವಾತಂತ್ರ್ಯ ನೀಡಿದ್ದಲ್ಲದೆ, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ನೀಡಿದರು. "ಸಾಧನೆಗನುಕೂಲವಾಗುವಂತೆ ಶೂನ್ಯದ ಹಾಗೂ ಸಮಾನತೆಯ ಸಂಕೇತವಾದ ಲಿಂಗವನ್ನು ಧರಿಸಿಕೊಳ್ಳಲು ಅವಕಾಶಕೊಟ್ಟದ್ದು ವೀರಶೈವ ಸಂಸ್ಕೃತಿಯ ಹೆಗ್ಗಳಿಕೆ"[೧೪] ನಾಡಿನ ಅಭಿವೃದ್ಧಿಗೆ ಸ್ತ್ರೀ ಶಕ್ತಿಯೂ ಅನಿವಾರ್ಯ ಎಂದು ಸಾರಿದ ವಚನಕಾರರು ಸ್ತ್ರೀಯರಿಗೆ ನೈತಿಕ ಬಲಕೊಟ್ಟರು. ಬಸವಣ್ಣನವರ ಪತ್ನಿ ನೀಲಾಂಬಿಕೆಯರ ವಚನ.

ನಾನಾರ ಸಾರುವೆನೆಂದು ಚಿಂತಿಸಲೇಕಯ್ಯ?
ನಾನಾರ ಹೊಂದುವೆನೆಂದು ಭ್ರಮೆಪಡಲೇಕಯ್ಯಾ?
ನಾನಾರ ಇರವನರಿಯೆನೆಂದು ಪ್ರಳಾಪಿಸಲೇಕಯ್ಯಾ?
ಪರಿಣಾಮ ಮೂರ್ತಿ ಬಸವನ ರೂಪುಕರಸ್ಥಳದಲ್ಲಿ ಬೆಳಗಿದ ಬಳಿಕ
ಸಂಗಯ್ಯನ ಹಂಗು ನಮಗೇತಕ್ಕೆ ಅಪ್ಪಣ್ಣಾ?[೧೫]

ಎಂದು ಹೇಳುವುದರ ಮೂಲಕ ಪತಿಯ ಆದರ್ಶವನ್ನು ಪಾಲಿಸಿದ ಸತಿಯಾಗಿ ಕಂಡುಬರುತ್ತಾಳೆ.

ಹಾಗೆಯೇ ಆಯ್ದಕ್ಕಿ ಮಾರಯ್ಯನ ಪತ್ನಿ ಲಕ್ಕಮ್ಮ ತನ್ನ ಗಂಡನ ಅಜ್ಞಾನಕ್ಕೆ ದುಃಖಿಸಿ ಬುದ್ಧಿವಾದ ಹೇಳುತ್ತಾಳೆ.

ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯ?
ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ ಅಯ್ಯಾ?
ಈಸಕ್ಕಿಯ ಆಸೆ ನಿಮಗೇಕೆ? ಈಶ್ವರನೊಪ್ಪ.

ಪತಿಯ ನೋವು–ನಲಿವುಗಳಲ್ಲಿ ಭಾಗಿಯಾಗಿ, ಪತಿಗೆ ತಕ್ಕ ಆದರ್ಶ ಸತಿಯಾಗಿ ಜೀವನ ನಡೆಸುತ್ತಿದ್ದ ವಚನಕಾರ್ತಿಯರು ಆಧುನಿಕ ಮಹಿಳೆಯರಿಗೆ ಮಾದರಿಯಾಗಿದ್ದಾರೆ. ವಿಶ್ವ ಸಂಸ್ಕೃತಿಗೆ ಅನುಪಮ ಕಾಣಿಕೆಯನ್ನು ನೀಡಿದ್ದಾರೆ.

**ಜಗತ್ತು ಮಾಯೆಯಲ್ಲ; ಸಾಧನೆಯ ಪವಿತ್ರಕ್ಷೇತ್ರ**

ಪುರಾಣ ಪುಣ್ಯಕಥೆಗಳಲ್ಲಿ ಜಗತ್ತು ಮಾಯೆ ಎಂಬ ನಂಬಿಕೆ ಹುಟ್ಟಿಸಲಾಗಿತ್ತು. ಆದರೆ ಮೊಟ್ಟ ಮೊದಲ ಬಾರಿಗೆ ಜಗತ್ತು ಮಾಯೆಯಲ್ಲ ಎಂದು ಇಡೀ ವಿಶ್ವಕ್ಕೆ ಸಾರಿದವರು ವಚನಕಾರರು.

ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ,
ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ
ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರಾ[೧೬]

ಅಲ್ಲಮ ಪ್ರಭು ವಿಶಾಲಾರ್ಥದಲ್ಲಿ ಮಾಯೆಯ ಅರ್ಥವನ್ನು ವಿವರಿಸಿದ್ದಾರೆ. ಇರುವ ಭೂಮಿಯೆಲ್ಲಾ ಮಾಯೆಯೆಂದು ತಿಳಿಯುವುದು ತಪ್ಪು. ವೈಜ್ಞಾನಿಕವಾಗಿ ನೋಡಿದಾಗ ಪ್ರಪಂಚದ ಯಾವ ವಸ್ತುವೂ ನಾಶಹೊಂದುವುದಿಲ್ಲ ಎಂಬುದು ವಚನಕಾರರ ಅಭಿಪ್ರಾಯವಾಗಿದೆ ಎಂದು ದೇಜಗೌ ಅರ್ಥ ಮಾಡಿಸಿದ್ದಾರೆ.

ದೇವರ ದಾಸಿಮಯ್ಯ ಹೇಳುವಂತೆ
ಕಾಯ ನಿಮ್ಮ ದಾನ, ಜೀವನಿಮ್ಮ ದಾನ
ಕಾಯ ಜೀವವುಳ್ಳಲ್ಲಿಯೇ ನಿಮ್ಮ ಪೂಜಿಸಿದ
ನಾಯಿಗಳನೇನೆಂಬೆ ಹೇಳಾ ರಾಮನಾಥಾ[೧೭]

ಪ್ರತಿಯೊಂದು ಶಿವನಿಂದ ಪ್ರಸಾದ ಎಂದು ನೆನೆಯುತ್ತಾರೆ. ಶಿವನಿಂದ ಬಂದದ್ದನ್ನು ಸರಿಯಾಗಿ ಬಳಸಿಕೊಂಡು ಶಿವನಿಗೆ ಅರ್ಪಿಸಬೇಕೆಂಬುದು ವಚನಕಾರರ

ಅರ್ಪಣಾಮನೋಭಾವವನ್ನು ತಿಳಿಸುತ್ತದೆ. ಪ್ರಕೃತಿ ಕೊಟ್ಟಿದ್ದನ್ನು ಪ್ರಕೃತಿಗೆ ಹಿಂತಿರುಗಿದಾಗ ಅದು ನಮ್ಮನ್ನು ಕಾಯುತ್ತದೆ. ಆದರೆ ಈಗ ಅದು ಸಾಧ್ಯವಾಗದ ಮಾತಾಗಿದೆ.

ದೇಜಗೌ ಅವರು ಮತ್ತೊಂದು ಪಿಷಯವನ್ನು ತಿಳಿಸಿದ್ದಾರೆ. ಇಂದ್ರಿಯ ಚಾಪಲ್ಯಕ್ಕೊಳಗಾದ ಜನರಿಗೆ ಇಂದ್ರಿಯಗಳೇ ಶತ್ರುಗಳು ಎಂಬ ನಂಬಿಕೆ ವಚನಕಾರರದಾಗಿತ್ತು. ಇದಕ್ಕೆ ಶಿವಲೆಂಕ ಮಂಚಣ್ಣನ ವಚನವೊಂದನ್ನು ಸಾಕ್ಷಿಯಾಗಿ ಕೊಡುತ್ತಾರೆ.

ರಸವನರಿವುದಕ್ಕೆ ಜಿಹ್ವೆಯಾಗಿ ಬಂದು,
ಗಂಧವನರಿವುದಕ್ಕೆ ನಾಸಿಕವಾಗಿ ಬಂದು,
ರೂಪವನರಿವುದಕ್ಕೆ ನೇತ್ರವಾಗಿ ಬಂದು,
ಶಬ್ದವನರಿವುದಕ್ಕೆ ಶ್ರೋತ್ರವಾಗಿ ಬಂದು,
ಸ್ಪರ್ಶವನರಿವುದಕ್ಕೆ ಶ್ರೋತ್ರವಾಗಿ ಬಂದು,
ಇಂತೆನ್ನ ಘಟದ ಮಧ್ಯದಲ್ಲಿ ನಿಂದು ಪಂಚವಕ್ತ್ರನಾದೆಯಲ್ಲಾ
ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವೇ?[೧೮]

ಇಷ್ಟು ಉದಾತ್ತವಾದ ಆಲೋಚನೆ ವಚನಕಾರರಲ್ಲಿ ಬಿಟ್ಟು ಬೇರೆಲ್ಲೂ ಕಂಡಿಲ್ಲ ಎಂಬ ಮಾತನ್ನು ದೇಜಗೌ ಹೇಳಿದ್ದಾರೆ. ಇಂದ್ರಿಯಗಳೆಲ್ಲ ಸರಿಯಿದ್ದು ಅವುಗಳ ಮಹತ್ವ ಅರಿಯದೆ ಅಲ್ಪಸುಖಕ್ಕಾಗಿ ಇಡೀ ಜೀವನವನ್ನೇ ವ್ಯರ್ಥವಾಗಿ ಕಳೆಯುವ ಮನುಷ್ಯರ ಮುಂದೆ ವಚನಕಾರರ ಆಧ್ಯಾತ್ಮಭಾವ ಹೋಲಿಕೆಗೆ ಸಿಗದು.

ಮನುಷ್ಯನಾಗಿ ಹುಟ್ಟಿದ ಮೇಲೆ ಹಲವಾರು ಸವಾಲುಗಳನ್ನು ಪರೀಕ್ಷೆಗಳನ್ನು ಎದುರಿಸಲು ಸಿದ್ಧನಿರಬೇಕೆಂದು ವಚನಕಾರರು ತಿಳಿಸುತ್ತಾರೆ.

ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯ!
ಸಮುದ್ರದ ತಡಿಯಲ್ಲಿ ಮನೆಯ ಮಾಡಿ ನೊರೆತೆರೆಗಳಿಗಂಜಿದಡೆಂತಯ್ಯ!
ಸಂತೆಯೊಳಗೊಂದು ಮನೆಯ ಮಾಡಿ. ಶಬ್ದಕ್ಕೆ ನಾಚೆದಡೆಂತಯ್ಯ
ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯಾ,
ಲೋಕದೊಳಗೆ ಹುಟ್ಟಿರ್ದ ಬಳಿಕ, ಸ್ತುತಿನಿಂದೆಗಳು ಬಂದಡೆ
ಮನದಲ್ಲಿ ಕೋಪವತಾಳದೆ ಸಮಾಧಾನಿಯಾಗಿರಬೇಕು.[೧೯]

ಅಕ್ಕಮಹಾದೇವಿಯ ಈ ವಚನ ಬದುಕಿನ ದರ್ಶನ ಮಾಡಿಸುತ್ತದೆ. ಇಡೀ ಸಂಸ್ಕೃತಿಯ ಜೀವಾಳ ಇದರಲ್ಲಿ ಅಡಗಿದೆ ಎಂದು ದೇಜಗೌ ಗುರುತಿಸಿದ್ದಾರೆ. ಸಾಧನೆಯ ಮಾರ್ಗ ಸುಲಭವಾದದ್ದಲ್ಲ ಎಂದು ಹೇಳುವುದರ ಜೊತೆಗೆ ಅಕ್ಕಮಹಾದೇವಿಯ ಸ್ವಾನುಭವವು ಈ ವಚನದಲ್ಲಿ ಅಡಿಗಿರುವುದರ ಬಗ್ಗೆ ದೇಜಗೌ ತಿಳಿಸಿಕೊಡುತ್ತಾರೆ. ಬಾಹ್ಯ ಶತ್ರುಗಳನ್ನು ನಾಶಮಾಡುವ ಮೊದಲು ಮನಸ್ಸಿನಲ್ಲಿರುವ ಕೋಪ, ಕ್ರೋಧ, ಅಸತ್ಯ, ಹಿಂಸೆ ಇವೆಲ್ಲವನ್ನು ನಾಶಮಾಡಿಕೊಳ್ಳಬೇಕು.

**ಕಾಯಕ ದಾಸೋಹಗಳು ಅನರ್ಘ್ಯ ಕೊಡುಗೆಗಳು**

ಪ್ರಪಂಚದಲ್ಲಿಯೇ ವಚನಕಾರರು ಶ್ರೇಷ್ಠ ಅರ್ಥಶಾಸ್ತ್ರಜ್ಞರಾಗಿದ್ದಾರೆ. ಅವರು ಕೊಟ್ಟಿರುವ ಆರ್ಥಿಕ ತತ್ವಗಳು ಜಗತ್ತಿನ ಬೇರೆ ಯಾವ ಅರ್ಥಶಾಸ್ತ್ರಜ್ಞರಲ್ಲಿಯೂ ಕಂಡುಬರುವುದಿಲ್ಲ. ಇವರು ನೀಡಿರುವ ಕಾಯಕ- ದಾಸೋಹ ತತ್ವ ಇಡೀ ವಿಶ್ವಕ್ಕೆ ಮಾದರಿಯಾಗಿದೆ. ಮಾನವನ ಆತ್ಮವಿಕಾಸ, ಸಮಾಜದ ಅಭ್ಯುದಯ, ನಾಡಿನ ಭದ್ರತೆ, ಲೋಕಕಲ್ಯಾಣ ಇವು ಕಾಯಕ-ದಾಸೋಹ ತತ್ವಗಳಾಗಿವೆ ಎಂದು ದೇಜಗೌ ಅವರು ಗುರುತಿಸಿದ್ದಾರೆ. ವಚನಕಾರರ ಪ್ರಕಾರ ಕ್ರಿಯೆಯ ಮಾಡುವಲ್ಲಿ ಅಹಂಕಾರವಿರಬಾರದು ಅವರವರ ಕೆಲಸ ಅವರಿಗೆ ಶ್ರೇಷ್ಠ ಯಾವುದೂ ಮೇಲಲ್ಲ, ಯಾವುದೂ ಕೀಳಲ್ಲ.

ಮಾಡುವಂತಿರಬೇಕು, ಮಾಡದಂತಿರಬೇಕು,
ಮಾಡುವ ಮಾಟದೊಳಗೆ ತಾನಿಲ್ಲದಂತಿರಬೇಕು,
ಕೂಡಲಸಂಗಮದೇವರ ನೆನೆವುತ್ತ ನೆನೆವುತ್ತ ನೆನೆಯದಂತಿರಬೇಕು.[೨೦]

ಕಾಯಕವನ್ನು ಕೇವಲ ತತ್ವವಾಗಿ ಅನುಸರಿಸದೆ ಅದೊಂದು ಕಠಿಣ ವ್ರತವಾಗಿ ಆಚರಿಸಬೇಕು ಎಂಬುದು ಶರಣರ ತತ್ವವಾಗಿತ್ತು. ಕಾಯಕವೇ ಕೈಲಾಸ ಎಂಬಷ್ಟರಮಟ್ಟಿಗೆ ಅವರ ಕಾಯಕನಿಷ್ಠೆ ಇತ್ತು ಎಂಬುದನ್ನು ದೇಜಗೌ ಅವರು ಮನಗಾಣಿಸಿದ ಅಂಶವಾಗಿದೆ. ಇಸ್ಲಾಂ, ಕ್ರೈಸ್ತ, ಬೌದ್ಧ ಧರ್ಮಗಳು ತಮ್ಮದೇ ಆದ ಕಾಯಕ ಮಹತ್ವವನ್ನು ಸಾರಿವೆ ಎಂಬುದನ್ನು ದೇಜಗೌ ಗುರುತಿಸಿದ್ದಾರೆ.

ನುಲಿಯ ಚಂದಯ್ಯನು

ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತಿ
ಲಿಂಗವಾದರೂ ಕಾಯಕದಿಂದಲೇ ಶಿಲೆಯ ಕುಲ ಹರಿವುದು
ಜಂಗಮವಾದರೂ ಕಾಯಕದಿಂದಲೆ ವೇಷದ ಪಾಶ ಹರಿವುದು[೨೧]

ಎಂಬ ವಚನ ಕಾಯಕದ ಮಹತ್ವವನ್ನು ಸಾರುತ್ತದೆ.

ಅಧರ್ಮದಿಂದ ಗಳಿಸಿದ ಹಣ ವ್ಯರ್ಥ ಎಂದು ವಚನಕಾರರ ಅಭಿಪ್ರಾಯ. ದುಡಿಯದೇ ಬೆವರು ಸುರಿಸದೆ. ಭಾವ ಶುದ್ಧಿಯಿಲ್ಲದೆ ಗಳಿಸಿದ ಹಣ ವ್ಯರ್ಥ ಎಂದು ಹೇಳುತ್ತಾರೆ. ಬೆವರು ಸುರಿಸಿ ಗಳಿಸಿದ ಹಣವನ್ನು ವ್ಯರ್ಥ ಮಾಡಲು ಯಾರೂ ಬಯಸುವುದಿಲ್ಲ ಎಂದು ಹೇಳುವುದರ ಮೂಲಕ ಕಪ್ಪು ಹಣ, ತಿರುಪತಿಯ ಹುಂಡಿಗಳಲ್ಲಿ ಇರುವ ಹಣ ಯಾವುದು ಎಂಬ ಅರಿವು ಮೂಡಿಸುತ್ತಾರೆ ದೇಜಗೌ ಅವರು.

ಚೆನ್ನಬಸವಣ್ಣನ ವಚನ

> ಕೃಷಿ ಕೃತ್ಯ ಆವ ಕಾಯಕದಿಂದಾದಡೇನು?
> ತನುಮನ ಬಳಲಿಸಿ ಗಳಿಸಿ ತಂದು, ಗುರುಲಿಂಗ ಜಂಗಮಕ್ಕೆ ಮೆಚ್ಚಿಸಿ
> ದಾಸೋಹವ ಮಾಡುವ ಪರಮಸದ್ಭಕ್ತನ ಪಾದವ ತೋರಯ್ಯ ಎನಗೆ
> ಅದೆಂತೆಂದೊಡೆ, ಆತನ ತನು ಶುದ್ಧ, ಆತನ ಮನ ಶುದ್ಧ, ಆತನ ನಡೆ ಶುದ್ಧ, ನುಡಿ ಎಲ್ಲ ಪಾವನವು. [೨೨]

ಕಾಯಕ – ದಾಸೋಹದಿಂದ ಆರ್ಥಿಕ ಸಮಾನತೆ ಮಾತ್ರವಲ್ಲ, ಸರ್ವಸಮಾನತೆ ಸಾಧ್ಯವೆಂಬುದನ್ನು ಲೋಕ ಅರಿಯಬೇಕಾಗಿದೆ ಎಂದು ದೇಜಗೌ ಅವರು ಕರೆ ನೀಡುತ್ತಾರೆ.

**ಶುದ್ಧ ಪರಿಪೂರ್ಣ ಸಮಾಜವಾದ:**

೧೨ನೆಯ ಶತಮಾನದ ಸಮಾಜವಾದೀ ಚಿಂತನೆಗಳು ಇಂದಿಗೂ, ಎಂದೆಂದಿಗೂ ಪ್ರಸ್ತುತ ಎಂಬುದನ್ನು ದೇಜಗೌ ಅವರು ವಿವರಿಸುತ್ತಾರೆ. ಇದನ್ನು ಸ್ಪಷ್ಟಪಡಿಸಿದ್ದಾರೆ. ಹಣ ಸಂಗ್ರಹ ಮಾಡುವ ಮನೋಭಾವ ಅನೇಕ ಸಮಸ್ಯೆಗಳಿಗೆ ಎಡೆಮಾಡಿಕೊಡುತ್ತದೆ ಎಂಬ ಸಂದೇಶವನ್ನು ರವಾನಿಸಿದ್ದಾರೆ ವಚನಕಾರರು. ಇದನ್ನು ಆಧುನಿಕ ಕಾಲದ ಗಾಂಧೀಜಿಯವರು ಸಂಗ್ರಹ ಬುದ್ಧಿಯನ್ನು ವಿರೋಧಿಸಿದ್ದರು ಎಂಬ ವಿಚಾರವನ್ನು ದೇಜಗೌ ಅವರು ತಿಳಿಸುತ್ತಾರೆ.

> ಆಯುಷ್ಯವುಂಟು ಪ್ರಳಯವಿಲ್ಲೆಂದು ಅರ್ಥವ ಮಡುಗುವಿರಿ.
> ಆಯುಷ್ಯವು ತೀರಿ ಪ್ರಳಯ ಬಂದಡೆ ಅರ್ಥವನುಂಬವರಿಲ್ಲ,
> ನೆಲನನಗೆದು ಮಡುಗದಿರಾ– ನೆಲ ನುಂಗಿದಡುಗುಳುವುದೇ?
> ಕಣ್ಣಿನಲ್ಲಿ ನೋಡಿ, ಮಣ್ಣಿನಲ್ಲಿ ನೆರಹಿ, ಉಣ್ಣದೆ ಹೋಗದಿರಾ। [೨೩]

ಗಳಿಸಿದ ಹಣ ಒಳ್ಳೆಯ ಕಾರ್ಯಕ್ಕೆ ಖರ್ಚಾಗಬೇಕು. ಖಾಸಗಿ ಸ್ವತ್ತು ವರ್ಜ್ಯ ಎಂದು ಹೇಳಿದ್ದಾರೆ. ಪ್ರಾಣಿಪಕ್ಷಿಗಳಂತೆ ನಿಸ್ವಾರ್ಥ ಬುದ್ಧಿಯನ್ನು ಹಂಚಿ ತಿನ್ನುವ ಬುದ್ಧಿಯನ್ನು ಕಲಿಯಬೇಕು ಎಂಬ ಕರೆಯನ್ನು ವಚನಕಾರರು ಕೊಡುತ್ತಾರೆ. ಅವಶ್ಯಕತೆಗಿಂತ ಸ್ವಲ್ಪ ಹೆಚ್ಚು ಹಣವನ್ನು ಶೇಖರಿಸಿಡುವುದು ಪಾಪ ಎಂದಿದ್ದಾರೆ. ಪ್ರತಿಯೊಬ್ಬರು ಸುಖ, ಭೋಗ ಜೀವನ ಬಯಸುತ್ತಾರೆ. ಕಷ್ಟದ ಸರಳ ಜೀವನ ಯಾರಿಗೂ ಬೇಡ. ಒಬ್ಬ ತಿಂದು ಹೆಚ್ಚಾಗಿ ಎಸೆಯುತ್ತಿರುವುದು ಒಂದು ಕಡೆಯಾದರೆ ಮತ್ತೊಬ್ಬ ಹಸಿವಿನಿಂದ ನರಳುತ್ತಿರುವುದು ಸಮಾನತೆಯಲ್ಲ ಎಂದು ವಚನಕಾರರ ಧೋರಣೆಯಾಗಿತ್ತು. ೧೨ನೆಯ ಶತಮಾನದ ಸಮಾಜವಾದಿ ಚಿಂತನೆಗಳು ೧೮ನೆಯ ಶತಮಾನದ ಫ್ರೆಂಚ್‌ಕ್ರಾಂತಿಯ ಕಲ್ಪನೆಗಿಂತ ಮಿಗಿಲಾಗಿವೆ ಎಂಬುದನ್ನು ದೇಜಗೌ ಅವರು ತಿಳಿಸಿಕೊಟ್ಟಿದ್ದಾರೆ.

**ನೈತಿಕ ಪ್ರಜ್ಞೆಯೇ ವಿಶ್ವಸಂಸ್ಕೃತಿಯ ನೆಲಗಟ್ಟು:**

ವಚನಕಾರರು ನೈತಿಕತೆಯ ಆಧಾರದ ಮೇಲೆ ನಡೆದ ಚಳುವಳಿ. ನೈತಿಕತೆಯು ಇವರ ವಚನಗಳಲ್ಲಿ ಹಾಸುಹೊಕ್ಕಾಗಿದೆ. ನೀತಿಯ ಆಧಾರದ ಮೇಲೆ ಧರ್ಮ ರಚನೆಯಾಗಿರುತ್ತದೆ. ಮನುಷ್ಯನನ್ನು ನಿಯಂತ್ರಿಸುವ ಶಕ್ತಿ ಧರ್ಮಕ್ಕಿದೆ. ಆದರೆ ಕಾಲಾನಂತರದಲ್ಲಿ ಧರ್ಮವೇ ಗುಂಪುಗಳಾಗಿ ಹಂಚಿಹೋಯಿತು. ಚಾತುರ್ವರ್ಣ ವ್ಯವಸ್ಥೆಯಲ್ಲಿ ಧರ್ಮದ ಆಚರಣೆಯಲ್ಲಿ ಬದಲಾವಣೆಯಾಯಿತು. ಮೇಲ್ವರ್ಗದವರು ಹೇಳಿದ್ದ ಧರ್ಮವಾಗಿತ್ತು. ಮೇಲ್ವರ್ಗದವರು ಧರ್ಮಾಚರಣೆಯಲ್ಲಿ ಕೆಲವು ಸಲ ಎಡಪಿದರೂ ಅದು ಮುಖ್ಯವಾಗುತ್ತಿರಲಿಲ್ಲ ಆದರೆ ಕೆಳವರ್ಗದ ಜನ ಧರ್ಮವನ್ನು ಕಟ್ಟುನಿಟ್ಟಾಗಿ ಪಾಲಿಸಬೇಕಿತ್ತು, ಪಾಲಿಸುತ್ತಿದ್ದರೂ ಕೂಡ. ರಾಜಪ್ರಭುತ್ವವು ಪುರೋಹಿತಶಾಹಿಯ ಜೊತೆಗೂಡಿ ನಡೆಯಲು ಆರಂಭಿಸಿದಾಗ ಜನಸಾಮಾನ್ಯರ ಶೋಷಣೆ ಹೆಚ್ಚಾಯಿತು. ಅವರ ಗೋಳು ಯಾರಿಗೂ ಬೇಡವಾಗಿತ್ತು.

ಇಂತಹ ಸಂದರ್ಭದಲ್ಲಿ ಶಾಶ್ವತ ಮೌಲ್ಯಗಳನ್ನು ಜಾರಿಗೆ ತರುವ ಉದ್ದೇಶದಿಂದ ನೈತಿಕ ನೆಲೆಗಟ್ಟಿನಲ್ಲಿ ಸಮಾನತೆ ತರುವ ಉದ್ದೇಶದಿಂದ ೧೨ನೆಯ ಶತಮಾನದಲ್ಲಿ ವಚನ ಚಳುವಳಿ ಆರಂಭವಾಯಿತು. ವಚನಕಾರರು ಧರ್ಮಕ್ಕನುಸಾರವಾಗಿ ಹೋರಾಡಿದರು. ಸ್ವಸ್ಥ ಸಮಾಜಕ್ಕೆ ಬೇಕಿರುವ ಸವಲತ್ತುಗಳನ್ನು ಪಡೆಯುವ ಸಲುವಾಗಿ ನೈತಿಕತೆಯ ನೆಲೆಗಟ್ಟಿನಲ್ಲಿ ಹೋರಾಟಕ್ಕಿಳಿದರು. ಅವರಲ್ಲಿದ್ದ ನೈತಿಕ ಪ್ರಜ್ಞೆ ಅಪಾರ. ವಚನಕಾರರು ಬರೆದಂತೆ ಬದುಕಿದರು, ಬದುಕಿದಂತೆ ಬರೆದರು. ಇಡೀ

ಪುರೋಹಿತಶಾಹಿತ್ವವನ್ನೇ ತಲೆತಗ್ಗಿಸುವ ಮಟ್ಟಿಗೆ ಅವರಲ್ಲಿ ನೈತಿಕಪ್ರಜ್ಞೆ ಬೇರೂರಿತ್ತು ಎಂಬುದನ್ನು ದೇಜಗೌ ಅವರು ಮನಗಾಣಿಸಿದ್ದಾರೆ.

ಮುಖ್ಯವಾಗಿ ಬಸವಣ್ಣನವರನ್ನು ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಬಸವಣ್ಣನವರ ಸಪ್ತಸೂತ್ರವಿರುವ ವಚನ

ಕಳಬೇಡ ಕೊಲಬೇಡ ಹುಸಿಯ ನುಡಿಯಬೇಡ
ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ
ತನ್ನ ಬಣ್ಣಿಸಬೇಡ, ಇದಿರ ಹಳಿಯಬೇಡ
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗಮದೇವನೊಲಿಸುವ ಪರಿ

ಈ ವಚನವೊಂದೇ ಸಾಕು ಮನುಷ್ಯ ಉನ್ನತಸ್ಥಾನಕ್ಕೇರಲು ಬಸವಣ್ಣನವರ ಈ "ವಚನದಲ್ಲಿ ಉಲ್ಲೇಖಿಸಲಾಗಿರುವ ಸಪ್ತಸೂತ್ರಗಳಲ್ಲಿ ಮೊದಲ ನಾಲ್ಕು ಮೋಸೆಸ್‌ನ ದಶಸೂತ್ರದಲ್ಲಿಯೂ ಸಿಗುತ್ತವೆ. ಕೊನೆಯ ಮೂರು ಬೇರೆಡೆ ದುರ್ಲಭ"[೨೪] ವಿಶ್ವಮಟ್ಟದ ಸಂತರಲ್ಲಿಯೇ ನೋಡಿದರೂ ಬಸವಣ್ಣನವರ ಮಟ್ಟಕ್ಕೆ ಯಾರು ಜೀವನದರ್ಶನ ಮಾಡಿಸಿಲ್ಲ ಎಂಬುದು ತಿಳಿದುಬರುತ್ತದೆ. ಅಂತಹ ನೀತಿಯನ್ನು ಇಡೀ ಪ್ರಪಂಚಕ್ಕೆ ಸಾರಿದ್ದಾರೆ.

ಹಾಗೆಯೇ ಪರಸತಿ, ಪರಧನ ವ್ಯಾಮೋಹ ಕುರಿತು ೧೨ನೆಯ ಶತಮಾನದಲ್ಲಿಯೇ ಬಸವಣ್ಣ ಎಚ್ಚರಿಕೆ ನೀಡಿದ್ದಾರೆ.

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ"[೨೫]

ಆದರೆ ಇಂದಿಗೂ ಈ ಮೋಹ ಹೋಗಿಲ್ಲ. ಮಠಾಧೀಶರೇ ಈ ಮೋಹಕ್ಕೆ ಸಿಲುಕಿಕೊಂಡು ಸಿಕ್ಕಿಬೀಳುತ್ತಿರುವುದು ೨೧ನೆಯ ಶತಮಾನದ ದುರಂತ. ಬ್ರಹ್ಮಚರ್ಯವನ್ನು ಸಾಧಿಸುವವನೇ ನಿಜವಾದ ಬ್ರಹ್ಮಚಾರಿ, ತಮ್ಮ ಧರ್ಮಕರ್ಮಗಳಿಗೆ ತಾವೇ ಕಾರಣರಲ್ಲದೆ ಬೇರೆಯವರಲ್ಲ ಎಂಬುದನ್ನು ತಿಳಿದುಕೊಂಡಾಗ ಸಾಮಾಜಿಕ ಸಾಮರಸ್ಯಗಳು ಸಾಧ್ಯ ಎಂಬುದನ್ನು ಸರಳವಾಗಿ. ಸುಲಭವಾಗಿ ಮನದಟ್ಟು ಮಾಡಿಸಿದ್ದಾರೆ.

ಮತ್ತೊಮ್ಮೆ 'ಎನಗೆ ನಾನೇ ಹಗೆ ನೋಡಯ್ಯ
ಎನಗೆ ನಾನೇ ಕೆಳೆ ನೋಡಯ್ಯ'[೨೬]

ಶತ್ರುಗಳನ್ನು ಬೇರೆಲ್ಲಿಯೂ ಹುಡುಕದೆ, ತಮ್ಮೊಳಗೆ ಅಡಗಿರುವ ಆಂತರಂಗಿಕ ಶತ್ರುಗಳನ್ನು ಅರಿತು ನಾಶಮಾಡಿಕೊಳ್ಳಬೇಕು ಆಗ ಮಾತ್ರ ಶಾಂತಿ ದೊರೆಯಲು ಸಾಧ್ಯ ಎಂದು ಉಪದೇಶ ನೀಡುವುದರ ಜೊತೆಗೆ ತನ್ನನ್ನು ತಾನು ಮೊದಲು ಅರಿಯುವುದು ಮುಖ್ಯ, ಇದು ಸುಸಂಸ್ಕೃತನ ಲಕ್ಷಣ ಎಂದು ಹೇಳುವುದರ ಮೂಲಕ ನೈತಿಕ ಪ್ರಜ್ಞೆಯನ್ನು ಜಾಗೃತಗೊಳಿಸಿದ್ದಾರೆ.

ದೇಜಗೌ ಅವರು ನೀತಿಸಂಹಿತವಾಗಿರುವ ವಚನಗಳು ಇಡೀ ವಿಶ್ವಸಂಸ್ಕೃತಿಗೆ ಆಧಾರವೆಂಬುದನ್ನು ಈ ರೀತಿ ವ್ಯಕ್ತಪಡಿಸುತ್ತಾರೆ. ಬದುಕು ಹಸನಾಗಿರಬೇಕೆಂಬುದೇ ವೀರಶೈವ ಧರ್ಮದ ಗುರಿಯಾದ್ದರಿಂದ, ಅದು ನೀತಿಪ್ರಜ್ಞೆಗೆ ಹೆಚ್ಚು ಒತ್ತುಕೊಡುತ್ತದೆಂಬುದು. ಅದು ಅನೇಕ ಅನರ್ಘ್ಯ ನೀತಿ ರತ್ನಗಳ ಖನಿಜವೆಂಬುದು ನೂರಕ್ಕೆ ನೂರು ಸತ್ಯ.

ದೇಜಗೌ ಅವರ ಈ ಅಭಿಪ್ರಾಯ ಇಡೀ ವಚನ ಸಾಹಿತ್ಯದ ಮಹತ್ವವನ್ನು ಸಾರುತ್ತದೆ. ಪುರಾಣ ಪುಣ್ಯ ಕಥೆಗಳು ಸಾರದ, ಋಷಿಮುನಿಗಳು ಹೇಳಿದ ಮಹತ್ವದ ಅಂಶಗಳನ್ನು ವಚನಕಾರರು ಹೇಳಿರುವುದು ಶ್ಲಾಘನೀಯವಾದುದೇ ಆಗಿದೆ. ಆದುದರಿಂದಲೇ ವಚನಗಳು ಇಂದಿಗೂ ಪ್ರಸ್ತುತವಾಗಿರುವುದು.

## ಕೊನೆಟಿಪ್ಪಣಿಗಳು

೧. ದೇಜಗೌ, ವಿಶ್ವಸಂಸ್ಕೃತಿ ವೀರಶೈವ ಸಂಸ್ಕೃತಿಯ ಕಾಣಿಕೆ, (೨೦೦೪), ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಪು. ೩.

೨. ಅದೇ., ಪು. ೯.

೩. ದೇಜಗೌ, ಬಸವದರ್ಶನ, ಮೊದಲಮುದ್ರಣ (೨೦೦೪), ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಪು. ೪೦೭.

೪. ದೇಜಗೌ, ವಿಶ್ವಸಂಸ್ಕೃತಿ ವೀರಶೈವ ಸಂಸ್ಕೃತಿಯ ಕಾಣಿಕೆ, (೨೦೦೪), ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಪು. ೧೩.

೫. ಅದೇ., ಪು. ೧೪.

೬. ಅದೇ., ಪು. ೧೫.

೭. ಅದೇ., ಪು. ೧೫.

೮. ಅದೇ., ಪು. ೧೬.

೯. ದೇಜಗೌ, ವಿಶ್ವಸಂಸ್ಕೃತಿ ವೀರಶೈವ ಸಂಸ್ಕೃತಿಯ ಕಾಣಿಕೆ, (೨೦೦೪), ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಪು. ೧೬–೧೭

೧೦. ಅದೇ., ಪು. ೧೮.

೧೧. ಅದೇ., ಪು. ೧೯

೧೨. ಅದೇ., ಪು. ೨೨.

೧೩. ಅದೇ., ಪು. ೨೪.

೧೪. ಅದೇ., ಪು. ೨೭.

೧೫. ಅದೇ., ಪು. ೨೭–೨೮.

೧೬. ಅದೇ., ಪು. ೩೩.

೧೭. ಅದೇ., ಪು. ೩೦.

೧೮. ಅದೇ., ಪು. ೩೧.

೧೯. ಅದೇ., ಪು. ೩೫.

೨೦. ಅದೇ., ಪು. ೩೮.

೨೧. ಅದೇ., ಪು. ೪೦.

೨೨. ಅದೇ., ಪು. ೪೨.

೨೩. ದೇಜಗೌ, ವಿಶ್ವಸಂಸ್ಕೃತಿ ವೀರಶೈವ ಸಂಸ್ಕೃತಿಯ ಕಾಣಿಕೆ, (೨೦೦೪), ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಪು. ೪೩.

೨೪. ಅದೇ, ಪು. ೪೮.

೨೫. ಅದೇ., ಪು. ೪೯.

೨೬. ಅದೇ., ಪು. ೪೯.

# ಅಧ್ಯಾಯ – ೭

## ಉಪಸಂಹಾರ

ಭಾರತ ಸರ್ವ ಧರ್ಮ ಸಮನ್ವಯವನ್ನು ಸಾಧಿಸುತ್ತಿರುವ ರಾಷ್ಟ್ರ. ಅನೇಕ ಧರ್ಮಗಳು, ಜಾತಿಗಳು, ಆಚಾರ–ವಿಚಾರಗಳು ರೂಢಿಯಲ್ಲಿವೆ. ಹಾಗೆಯೇ ಕರ್ನಾಟಕವೂ ಹಲವು ಧರ್ಮ, ಜಾತಿ, ಸಂಪ್ರದಾಯ, ಆಚರಣೆಗಳಿಗೆ ಆಶ್ರಯಕೊಟ್ಟಿರುವ ರಾಜ್ಯವಾಗಿದೆ. ಕನ್ನಡ ನಾಡು, ಕನ್ನಡ ಭಾಷೆಗೆ ಹಲವಾರು ವರ್ಷಗಳ ಇತಿಹಾಸವಿದೆ. ಈ ಇತಿಹಾಸವೇ ಅದರ ಹಿರಿಮೆಯನ್ನು ಸಾರುತ್ತದೆ. ವಿಶ್ವದ ಎಲ್ಲಾ ಸಂಸ್ಕೃತಿಗಳು ನೆಲೆಗೊಂಡಿವೆ. ಕನ್ನಡಿಗರ ಪ್ರೀತಿ, ವಿಶ್ವಾಸ, ಸೌಹಾರ್ದತೆಗೆ ಸಾಕ್ಷಿಯಾಗಿದೆ. ಆಧ್ಯಾತ್ಮಿಕ ತವರೂರಾಗಿರುವ ಕರ್ನಾಟಕದಲ್ಲಿ ಹಲವಾರು ಋಷಿ–ಮುನಿಗಳು, ಸಾಧು–ಸಂತರು ನೆಲಸಿದ್ದರೆಂಬುದು ಪುರಾಣ ಕಥೆಗಳಿಂದ ತಿಳಿದುಬರುತ್ತದೆ. ಅನೇಕ ರಾಜಮಹಾರಾಜರು ಆಳ್ವಿಕೆ ನಡೆಸಿ ಸಾಹಿತ್ಯಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ತಮ್ಮದೇ ಕೊಡುಗೆ ನೀಡಿ, ಅನೇಕ ಧರ್ಮಗಳ ಆಶ್ರಯದಾತರೂ ಆಗಿದ್ದಾರೆ ಎಂಬುದು ಶಾಸನಗಳಿಂದ ವೇದ್ಯವಾಗುತ್ತದೆ.

ಸಾಹಿತ್ಯಿಕವಾಗಿ ಶ್ರೀಮಂತ ಪರಂಪರೆಯನ್ನು ಹೊಂದಿರುವ ಕನ್ನಡ ಸಾಹಿತ್ಯವನ್ನು ಭಾಷೆಯ ಆಧಾರದ ಮೇಲೆ ವಿವಿಧ ಹಂತಗಳ ಮೂಲಕ ಅಧ್ಯಯನ ಮಾಡಲಾಗುತ್ತಿದೆ. ಆಯಾ ಕಾಲ ಘಟ್ಟದ ಕವಿಗಳು ತಮ್ಮದೇ ಆದ ಪಾಂಡಿತ್ಯ, ಪ್ರತಿಭೆಯನ್ನು ತೋರಿದ್ದಾರೆ. ಬುದ್ಧಿಗೆ ಗೋಚರಿಸಿದ ಸಾಹಿತ್ಯ ಪಾಂಡಿತ್ಯ ಪ್ರದರ್ಶನವಾಗುತ್ತದೆ. ಸುಮಾರು ೧೧ನೆಯ ಶತಮಾನದವರೆಗಿನ ಸಾಹಿತ್ಯದ ಉದ್ದೇಶ ಪಾಂಡಿತ್ಯ ಪ್ರದರ್ಶನವೇ ಆಗಿತ್ತು. ಆದರೆ ಮನುಷ್ಯನ ಹೃದಯಕ್ಕೆ ಗೋಚರವಾಗುವ ಸಾಹಿತ್ಯವನ್ನು ರಚನೆ ಮಾಡಿದ ಕೀರ್ತಿ ೧೨ನೆಯ ಶತಮಾನದ ವಚನಕಾರರಿಗೆ ಸಲ್ಲುತ್ತದೆ. ಆದುದರಿಂದಲೇ ಅದು ಜನಸಾಮಾನ್ಯರಿಗೂ ತಲುಪಿದ್ದು ಅದು ಬಳಸಿಕೊಂಡಿದ್ದ ಭಾಷೆ, ಒಳಗೊಂಡ ವಿಚಾರ ಅನೇಕ ಅಂಶಗಳು ಕಾರಣವಾಗಿರಬಹುದು.

ಕನ್ನಡ ನಾಡಿನ ಹೆಸರಾಂತ ಲೇಖಕ ದೇಜಗೌ ಅವರು ವಚನ ಸಾಹಿತ್ಯವನ್ನು, ವಿವಿಧ ನೆಲೆಗಳಲ್ಲಿ ವಚನಗಳ ಪ್ರಭಾವವನ್ನು ತಿಳಿಸಿಕೊಟ್ಟಿದ್ದಾರೆ. ವಚನ ಸಾಹಿತ್ಯ ಕುರಿತು ಅನೇಕ ರೀತಿಯ ಸಂಶೋಧನೆಗಳು, ಲೇಖನಗಳು, ಅಭಿಪ್ರಾಯಗಳು ಹೊರಬಂದಿದ್ದರೂ ದೇಜಗೌ ಅವರ ವಿಚಾರಗಳು ಪ್ರಸ್ತುತವಾಗಿವೆ. ವಚನ ಸಾಹಿತ್ಯದ

ಮೇಲೆ ವಿಶೇಷ ಬೆಳಕನ್ನು ಬೀರಿವೆ. ವಚನ ಸಾಹಿತ್ಯ ಕುರಿತು ಸಂಶೋಧನೆಗೆ ತೊಡಗಿದಷ್ಟು ಹೊಸ ಹೊಸ ವಿಚಾರಗಳು ಹೊರಬರುತ್ತವೆ. ಓದಿದಷ್ಟು ನವನವೀನ ಆಲೋಚನೆಗಳು ಮೂಡುತ್ತವೆ. ಆದುದರಿಂದಲೇ ೧೨ನೆಯ ಶತಮಾನದ ವಚನ ಸಾಹಿತ್ಯ ೨೧ನೆಯ ಶತಮಾನದಲ್ಲಿಯೂ ಚರ್ಚೆಗೆ ಒಳಗಾಗುತ್ತಿರುವುದು. ಅಷ್ಟು ವಿಶಾಲ ವ್ಯಾಪ್ತಿಯನ್ನು, ವಿಚಾರಗಳನ್ನು ತನ್ನ ಒಡಲಲ್ಲಿ ಅಡಗಿಸಿಕೊಂಡಿದೆ.

ವಚನಕಾರರು ಕೇವಲ ವಚನಗಳನ್ನು ರಚನೆ ಮಾಡದೆ ವಿಮರ್ಶಕರಾಗಿಯೂ ಗೋಚರವಾಗಿರುವುದನ್ನು ದೇಜಗೌ ಮುಖ್ಯವಾಗಿ ಗುರುತಿಸಿದ್ದಾರೆ. ಇದು ವಚನಕಾರರ ಹೆಗ್ಗಳಿಕೆಯೂ ಆಗಿದೆ.

ದೇಜಗೌ ಅವರೇ ಅಭಿಪ್ರಾಯ ಪಡುವಂತೆ "ವಚನಗಳು ಶ್ರೀ ಸಾಮಾನ್ಯನ ಜೀವನಧರ್ಮಶಾಸ್ತ್ರವೂ ಹೌದು, ಅಧ್ಯಾತ್ಮ ವಿಜ್ಞಾನದ ಕೈಪಿಡಿಗಳೂ ಹೌದು, ಮೋಕ್ಷಶಾಸ್ತ್ರವೂ ಹೌದು, ನೀತಿಶಾಸ್ತ್ರದ ಮೂಲ ಪಾಠಗಳೂ ಹೌದು, ಅವುಗಳಲ್ಲಿ ಶರಣರ ಆತ್ಮ ಸಂಶೋಧನೆಯ ಲಹರಿಗಳಿವೆ. ಸ್ತೋತ್ರಪಾಠಗಳಿವೆ. ಲೋಕಾನುಭವವಿದೆ, ತಾತ್ತ್ವಿಕ ಚಿಂತನೆಗಳಿವೆ. ಸಾಮಾಜಿಕ ಜೀವನದ ಇತಿಹಾಸವಿದೆ. ವಿಶ್ವಮಾನವ ದರ್ಶನವಿದೆ".[೧]

ದೇಜಗೌ ಅವರ ಅಭಿಪ್ರಾಯದಲ್ಲಿಯೇ ವಚನಗಳು ಒಳಗೊಳ್ಳದಿರುವ ವಿಚಾರಗಳು ಯಾವುವು ಎಂಬುದನ್ನು ಹುಡಕಬೇಕಾಗಿದೆ. ಈ ಎಲ್ಲಾ ವಿಚಾರಗಳನ್ನು ತಮ್ಮ ಕೃತಿಗಳಲ್ಲಿ ಸಾಬೀತುಮಾಡಿದ್ದಾರೆ. ಸಂಶೋಧನಾ ವಿಷಯವಾಗಿ ಆಯ್ಕೆ-ಮಾಡಿಕೊಂಡು ನಿಬಂಧ ರಚನೆಗೆ ತೊಡಗಿದಾಗ ಈ ಎಲ್ಲಾ ಸಮಗ್ರ ವಿಷಯಗಳನ್ನು ಗ್ರಹಿಸಲು ಸಾಧ್ಯವಾಗಿದೆ. ವಚನಗಳಲ್ಲಿ ಋಷಿ ಮುನಿಗಳ, ಸಾಧು-ಸಂತರ ಉಪದೇಶಗಳಿವೆ. ಹಾಗೆಯೇ ಆಧುನಿಕರ ವೈಚಾರಿಕ ಪ್ರಜ್ಞೆಯೂ ಇದೆ. ವಚನಕಾರರು ಸಮಾಜ ವಿಜ್ಞಾನಿಗಳಾಗಿ, ರಾಜಕೀಯ ಚಿಂತಕರಾಗಿ, ಮನೋವಿಜ್ಞಾನಿಗಳಾಗಿ ಕಂಡುಬರುತ್ತಾರೆ. ಇಷ್ಟೆಲ್ಲಾ ಅರಿವು ವಚನಕಾರರಲ್ಲಿತ್ತು ಎಂಬುದು ನಮಗೆ ಆಶ್ಚರ್ಯವನ್ನುಂಟುಮಾಡುತ್ತದೆ.

ಆಧುನಿಕ ಕಾಲದ ಎಷ್ಟೋ ಕ್ರಾಂತಿಗಳಿಗೆ, ಹೋರಾಟಗಳಿಗೆ ವಚನಯುಗ ಪ್ರೇರೇಪಣೆ ನೀಡಿದೆ. ಒಂದು ಸಾಮಾಜಿಕ ಚಳುವಳಿಯಾಗಿ ಬಿಂಬಿತವಾಗಿದ್ದ ವಚನ ಚಳುವಳಿ ಆರ್ಥಿಕ, ರಾಜಕೀಯ, ಧಾರ್ಮಿಕ ಸುಧಾರಣೆಗಳನ್ನು ಬಿಂಬಿಸಿದೆ.

ದೇಜಗೌ ಅವರು ಪ್ರಮುಖ ವಚನಕಾರರನ್ನೆಲ್ಲಾ ಎಲ್ಲಾ ದೃಷ್ಟಿಕೋನಗಳಿಂದಲೂ ಪರಿಚಯಿಸಿದ್ದಾರೆ. ಅವರಲೆಲ್ಲಾ ಮುಖ್ಯವಾಗಿ ಬಸವಣ್ಣನವರ ವಿಚಾರಧಾರೆಗಳನ್ನು ಆಮೂಲಾಗ್ರವಾಗಿ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಬುದ್ಧನೊಳಗೊಬ್ಬ ಅಂಬೇಡ್ಕರರಲ್ಲೊಬ್ಬ ಬಸವಣ್ಣ ಇದ್ದಾರೆಂಬ ವಿಷಯವನ್ನು ಅನೇಕ ವಿಚಾರಧಾರೆಗಳ ಮೂಲಕ ಸ್ಪಷ್ಟೀಕರಿಸಿದ್ದಾರೆ. ಕೇವಲ ಬುದ್ಧನಾಗಿ, ಬಸವಣ್ಣನಾಗಿ, ಅಂಬೇಡ್ಕರ್‌ರಾಗಿ ತಿಳಿದುಕೊಳ್ಳುತ್ತಿದ್ದವರಿಗೆ ಮೂವರ ವ್ಯಕ್ತಿತ್ವದ ಅಂತರಗಳು, ಸಾಮ್ಯತೆಗಳನ್ನು ಪರಿಚಯಿಸಿದ್ದಾರೆ. ಈ ಮೂವರನ್ನು ಪರಿಚಯಿಸುವಾಗಲೇ ಆಧುನಿಕರಾದ ಗಾಂಧಿ, ಸ್ವಾಮಿ ವಿವೇಕಾನಂದ, ರಾಮಕೃಷ್ಣ ಪರಮಹಂಸ ಮೊದಲಾದ ದಾರ್ಶನಿಕರ ಜೊತೆ ಪಾಶ್ಚಾತ್ಯರಾದ ಕಾರ್ಲ್ಸ್‌ಮಾರ್ಕ್ಸ್, ಲೆನಿನ್ ಮೊದಲಾದ ಹೋರಾಟಗಾರರ ಚಿಂತನೆಗಳನ್ನು ಅರ್ಥಮಾಡಿಸಿದ್ದಾರೆ.

ಎಲ್ಲೆಲ್ಲೂ ತಾಂಡವವಾಡುತ್ತಿದ್ದ ಮೂಢನಂಬಿಕೆ, ಪುರೋಹಿತಶಾಹಿಗಳ ದಬ್ಬಾಳಿಕೆ ಶೋಷಣೆಯಿಂದ ನಲುಗಿಹೋಗಿದ್ದ ಸಾಮಾನ್ಯ ಜನರಿಗೆ ನ್ಯಾಯ ದೊರಕಿಸಿಕೊಡುವುದು ಬಸವಣ್ಣನವರ ಮೊದಲ ಆದ್ಯತೆಯಾಗಿತ್ತು. ದೇವರು, ಧರ್ಮದ ಹೆಸರಿನಲ್ಲಿ ಸಾಮಾಜಿಕ ಸವಲತ್ತುಗಳಿಂದ ದೂರವಿದ್ದ ಮೌಢ್ಯಗಳಿಂದಲೇ ಜೀವನಸಾಗಿಸುತ್ತಿದ್ದ ಕೆಳವರ್ಗದವರ ಬುದ್ಧಿಗೆ ಮರುಗಿ ಬಸವಣ್ಣನವರು ಮೌಢ್ಯವನ್ನು ಬೆಳೆಸುತ್ತಿದ್ದವರೇ ಪುರೋಹಿತರು, ಅವರನ್ನು ಮುಖ್ಯ ಎನಿಸಿಕೊಂಡಿದ್ದ ರಾಜರು. ಮಂತ್ರಿಗಳು, ಶ್ರೀಮಂತರು ಅನುಸರಿಸುತ್ತಿದ್ದರು ಎಂದು ಹೇಳುತ್ತಾರೆ. ಏನೂ ಅರಿಯದಿದ್ದ ಜನರಿಗೆ ಅಜ್ಞಾನವನ್ನು ಬಿತ್ತುತ್ತಿದ್ದರು ಎಂದು ಹೇಳುತ್ತಾರೆ.

ಎಮ್ಮವರು ಬೆಸಗೊಂಡಡೆ ಶುಭಲಗ್ನವೆನ್ನಿರಯ್ಯಾ
ರಾಶಿಕೂಟ ಗಣಸಂಬಂಧವುಂಟೆಂದು ಹೇಳಿರಯ್ಯಾ
ಚಂದ್ರಬಲ ತಾರಾಬಲವುಂಟೆಂದು ಹೇಳಿರಯ್ಯಾ
ನಾಳಿನ ದಿನಕ್ಕಿಂದಿನ ದಿನ ಲೇಸೆಂದು ಹೇಳಿರಯ್ಯಾ
ಕೂಡಲ ಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯಾ[೨]

ಇಂದು ಅತ್ಯಂತ ವ್ಯಾಪಕವಾಗಿ ಪ್ರಸಿದ್ಧಿಪಡೆಯುತ್ತಿರುವ ಜ್ಯೋತಿಷಿಗಳಿಗೆ ಚಾಟಿಏಟಿನಂತಹ ಉತ್ತರವನ್ನು ಬಸವಣ್ಣನವರು ೧೨ನೆಯ ಶತಮಾನದಲ್ಲೇ ಕೊಟ್ಟಿದ್ದಾರೆ. ಆದರೆ ಆಧುನಿಕರೆನಿಸಿಕೊಂಡಿರುವ ವಿದ್ಯಾವಂತರೇ ಇವರ ಬಲೆಗೆ ಬೀಳುತ್ತಿರುವುದು ದುರ್ದೈವದ ಸಂಗತಿ.

ಮಡಕೆದೈವ, ಮೊಱದೈವ, ಬೀದಿಯ ಕಲ್ಲುದೈವ
ಹಣೆಗೆ ದೈವ ಬಿಲ್ಲ ನಾರಿ ದೈವ ಕಾಣಿರೊ
ಕೊಳಗ ದೈವ ಗಿಣ್ಣಿಲು ದೈವ ಕಾಣಿರೊ
ದೈವ ದೈವವೆಂದು ಕಾಲಿಡಲಿಂಬಿಲ್ಲ
ದೈವನೊಬ್ಬನೆ ಕೂಡಲಸಂಗಮದೇವ.[೩]

ಆಧುನಿಕ ಕಾಲದ ಚಿತ್ರಣ ಬಸವಣ್ಣರಲ್ಲಿ ಆಗಲೇ ಮೂಡಿದ್ದಿರಬೇಕು. ಈಗಿನ ದೇವರುಗಳನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಅಂದೇ. ಈ ರೀತಿಯ ಪರಿಸ್ಥಿತಿ ಇತ್ತೆಂದರೆ ಅಚ್ಚರಿಯೂ ಮೂಡುತ್ತದೆ. ಬಸವಣ್ಣನವರು ಬಹುದೇವತಾರಾಧನೆಯನ್ನು ವಿರೋಧಿಸಿದವರು. ಏಕದೇವೋಪಾಸಕರಾಗಿದ್ದರು. ತೋರಿಕೆ ಭಕ್ತಿಯನ್ನು ತಿರಸ್ಕಾರ ಮಾಡಿದವರು. ಭಕ್ತನಿಗೆ ಶ್ರದ್ಧೆ ಮುಖ್ಯ ಎಂದು ಸಾರಿದರು.

ವಚನಕಾರರು ಕಠೋರವಾಗಿ ವಿರೋಧಿಸುತ್ತಿದ್ದ ಮತ್ತೊಂದು ವಿಷಯ ಬಡವ-ಶ್ರೀಮಂತರೆಂಬ ತಾರತಮ್ಯವನ್ನು, ಹಣದ ಶ್ರೀಮಂತಿಕೆಗಿಂತ ಹೃದಯ ಶ್ರೀಮಂತಿಕೆಯನ್ನು ಬಯಸಿದವರು.

ಹಾವು ತಿಂದವರ ನುಡಿಸಬಹುದು
ಸಿರಿಗರ ಹೊಡೆದವರ ನುಡಿಸಲುಬಾರದು ನೋಡಯ್ಯಾ!
ಬಡತನವೆಂಬ ಮಂತ್ರವಾದಿ ಹೊಗಲೊಡನೆ
ನುಡಿವರಯ್ಯ ಕೂಡಲಸಂಗಮದೇವಾ[೪]

ಎಷ್ಟೇ ಶತಮಾನಗಳು ಕಳೆದರೂ ಶ್ರೀಮಂತರ ಗುಣಗಳು ಬದಲಾಗಿಲ್ಲ, ಮನುಷ್ಯ ಸ್ವಾರ್ಥಿ, ಪ್ರಾಣಿ-ಪಕ್ಷಿಗಳ ಸಹಕಾರ ಮನೋಭಾವ ಅವನಲ್ಲಿಲ್ಲ ಎಂಬುದನ್ನು

ಕಾಗೆ ಒಂದಗುಳ ಕಂಡಡೆ ಕರೆಯದೆ ತನ್ನ ಬಳಗವನು
ಕೋಳಿ ಒಂದು ಕುಟುಕಿ ಕಂಡಡೆ ಕೂಗಿ ಕರೆಯದೆ ತನ್ನ ಕುಲವನೆಲ್ಲವ
ಶಿವಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದರೆ ಕಾಗೆ ಕೋಳಿಯಿಂದ ಕರಕಷ್ಟ
ಕೂಡಲಸಂಗಮ ದೇವಾ[೫]

ಎಂದು ಮನುಷ್ಯನ ಸ್ವಾರ್ಥವನ್ನು ಮನಗಾಣಿಸಿದ್ದಾರೆ. ವಚನಕಾರರ ಸಾಧನೆಗಳಲ್ಲಿ ಕಾಯಕ-ದಾಸೋಹ ತತ್ವ ವಿಶ್ವಮಟ್ಟದಲ್ಲಿ ನಿಲ್ಲುತ್ತದೆ ಎಂಬುದು ತಿಳಿಯುತ್ತದೆ. ಪ್ರಪಂಚವೇ ಕಂಡರಿಯದ ತತ್ವವಾಗಿದೆ. ಮನುಷ್ಯನಿಗೆ ಹಣ ಎಷ್ಟು ಮುಖ್ಯವೋ ಅದರ ಗಳಿಕೆ, ಬಳಕೆ, ಸಂಗ್ರಹ, ವಿತರಣೆಯ ಬಗ್ಗೆ ಅರ್ಥಗರ್ಭಿತವಾಗಿ ತಿಳಿಸಿಕೊಟ್ಟಿದ್ದಾರೆ. ಸ್ತ್ರೀ

ಸಮಾನತೆಯನ್ನು ಎತ್ತಿ ಹಿಡಿದವರು ವಚನಕಾರರು. ಯಾವ ಧರ್ಮವು ಸ್ತ್ರೀಗೆ ಸ್ವಾತಂತ್ರ್ಯ ಕಲ್ಪಿಸಿರಲಿಲ್ಲ. ಸ್ತ್ರೀ ಸ್ವಾತಂತ್ರ್ಯಕ್ಕೆ ಅರ್ಹಳಲ್ಲ ಎಂಬುದನ್ನೇ ಬಿಂಬಿಸಲಾಗಿತ್ತು. ಸ್ತ್ರೀ ಪುರುಷನಷ್ಟೇ ಸಮಾನಳು ಎಂಬುದನ್ನು ಸಾಬೀತುಪಡಿಸಲು ಅವಕಾಶ ಕಲ್ಪಿಸಿಕೊಟ್ಟವರು ವಚನಕಾರರು ಎಂಬುದನ್ನು ದೇಜಗೌ ಅವರು ತಿಳಿಸಿಕೊಟ್ಟಿದ್ದಾರೆ.

ಮತ್ತೊಂದು ಸಾಧನೆ ಅನುಭವ ಮಂಟಪದ ಸ್ಥಾಪನೆ. ಜನಸಾಮಾನ್ಯರೆಲ್ಲಾ ಕುಳಿತು ಮುಕ್ತವಾಗಿ ಚರ್ಚಿಸುತ್ತಿದ್ದರು. ವಚನ ಸಾಹಿತ್ಯದ ಒಂದು ಲಕ್ಷಣವೇ ಮುಕ್ತತೆ. ತಮ್ಮ ಅನುಭವಗಳನ್ನೆಲ್ಲಾ ಅನುಭಾವಿಸಿ ವಚನಗಳನ್ನು ರಚನೆ ಮಾಡುತ್ತಿದ್ದರು. ಪುರೋಹಿತಶಾಹಿಗಳ ಆಧಾರವಾಗಿದ್ದ ವೇದ ಆಗಮಗಳನ್ನು ಬಸವಣ್ಣ ಹೀಗೆ ವಿಶ್ಲೇಷಿಸಿದ್ದಾರೆ.

ವೇದಕ್ಕೆ ಬರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ,
ತರ್ಕದ ಬೆನ್ನ ಬಾರನೆತ್ತುವೆ, ಆಗಮದ ಮೂಗ ಕೊಯಿವೆ, ನೋಡಯ್ಯ
ಮಹಾದಾನಿ ಕೂಡಲ ಸಂಗಮದೇವಾ,
ಮದಾರಾ ಚೆನ್ನಯ್ಯನ ಮನೆಯ ಮಗ ನಾನಯ್ಯ[೬]

ಇಷ್ಟು ಧೈರ್ಯ ವಚನಕಾರರಿಗಲ್ಲದೆ ಮತ್ತೊಬ್ಬರಿಗೆ ಬರದು ಪುರಾಣ ಪುಣ್ಯ ಕೃತಿಗಳನ್ನು ಪ್ರಶ್ನಿಸುವ ನೈತಿಕ ಧೈರ್ಯ ಬಸವಣ್ಣನಾದಿಯಾಗಿ ಎಲ್ಲಾ ವಚನಕಾರರಿಗೂ ಇತ್ತು ಎಂಬುದನ್ನು ಅನೇಕ ವಚನಗಳ ಮೂಲಕ ದೇಜಗೌ ಗುರುತಿಸಿದ್ದಾರೆ.

ದೇಜಗೌ ಅವರು ಪ್ರಪಂಚದ ಇತರ ಧರ್ಮಗಳಾದ ಕ್ರೈಸ್ತ, ಇಸ್ಲಾಂ ಧರ್ಮಗಳ ಚಿಂತನೆಗಳ ಜೊತೆ ತೌಲನಿಕವಾಗಿ ವಿವರಿಸಿದ್ದಾರೆ. ಅವುಗಳಿಗೆ ಹೋಲಿಸಿದರೆ ವಚನಗಳು ಮೇಲ್‌ಸ್ತರದಲ್ಲಿ ನಿಲ್ಲುತ್ತವೆ ಎಂಬುದನ್ನು ಸಾಬೀತುಮಾಡಿದ್ದಾರೆ. ಎಲ್ಲಾ ಮಹಾನ್ ವ್ಯಕ್ತಿಗಳ ಧರ್ಮ ಸ್ಥಾಪಕರ ಹೋರಾಟ ಬೇರೆ ಬೇರೆ ರೀತಿಯಿದ್ದರೂ ಉದ್ದೇಶ ಸಾಮಾಜಿಕ ಹಿತಸಾಧನೆಯೇ ಆಗಿತ್ತು ಎಂಬ ವಿಷಯವನ್ನು ಮನದಟ್ಟುಮಾಡಿದ್ದಾರೆ. ಸಾಮಾನ್ಯರಲ್ಲಿ ಸಾಮಾನ್ಯರಾಗಿ ಹೋರಾಡಿದ ವಚನಕಾರರ ಚಳುವಳಿ ಯಶಸ್ವಿಯೂ ಆಯಿತು ಎಂಬುದು ದೇಜಗೌ ಅವರ ಕೃತಿಗಳಿಂದಲೇ ತಿಳಿದುಬರುತ್ತದೆ. ಆಧುನಿಕ ಕಾಲದಲ್ಲಿರುವ ಆರ್ಥಿಕ ಅಸಮಾನತೆ, ಅರಾಜಕತೆ, ಅನೈತಿಕತೆ, ದಬ್ಬಾಳಿಕೆ ಶೋಷಣೆ, ಅತ್ಯಾಚಾರ ಮೊದಲಾದ ಸಾಮಾಜಿಕ ಪಿಡುಗುಗಳು ಮುಂದುವರೆಯುತ್ತಿರುವಲ್ಲಿ ವಚನಗಳು ಪರಿಣಾಮಕಾರಿಯಾಗಿ ಪ್ರಸಾರ–ವಾಗಲಿಲ್ಲವೇನೋ ಎಂಬ ಪ್ರಶ್ನೆಯೂ ಮೂಡುತ್ತದೆ. ವಚನಯುಗವನ್ನು ಅವಲೋಕಿಸಿದಾಗ ಯಾವುದರ ಬದಲಾವಣೆಗಾಗಿ ಹೋರಾಡಿದರೋ ಆ ಸಮಾಜ

ಇಂದಿಗೂ ಹಾಗೆ ಇದೆ ಅಂದರೆ ಜನರಲ್ಲಿ ಜಾಗೃತಿ ಮೂಡಿಲ್ಲವೇನೋ ಎಂಬ ಭಾವನೆ ಮೂಡುತ್ತದೆ.

೧೨ನೆಯ ಶತಮಾನಕ್ಕೂ ಆಧುನಿಕ ಕಾಲಕ್ಕೂ ಮನುಷ್ಯರ ಭಾವನೆಗಳು ಬದಲಾವಣೆಯಾಗಿಲ್ಲ, ಬುದ್ಧಿಯಲ್ಲಿ ಬದಲಾವಣೆಯಾಗಿದೆ. ತಂತ್ರಜ್ಞಾನದ ಬಳಕೆ ಆವಿಷ್ಕಾರವಾಗಿದೆಯೋ ಹೊರತು ಅಜ್ಞಾನ, ಅಂಧಕಾರ, ಜಾತಿ ತಾರತಮ್ಯ ಮುಂದುವರೆದಿದೆ. ದಿನವೂ ನಡೆಯುತ್ತಿರುವ ಘಟನೆಗಳು ಸಾಕ್ಷಿಯಾಗಿವೆ. ವಚನಗಳನ್ನು ಕೇವಲ ಉಪದೇಶವಾಗಿ ಕೇಳದೆ ಬದುಕಿನಲ್ಲಿ ಅಳವಡಿಸಿಕೊಂಡಾಗ ವಚನಕಾರರು ಕಂಡ ಆರೋಗ್ಯಕರ ಸಮಾಜ ನಿರ್ಮಾಣವಾಗಬಹುದೇನೋ ಎಂಬ ಆಶಾಭಾವನೆ ಮೂಡುತ್ತದೆ. ಉತ್ತಮ ಮಾರ್ಗದಲ್ಲಿ ನಡೆಯಲು ಮಾರ್ಗದರ್ಶನ ನೀಡುತ್ತವೆ ಎಂಬ ಮಾಹಿತಿಯನ್ನು ದೇಜಗೌ ಅವರ ಕೃತಿಗಳು ಪರಿಣಾಮಕಾರಿಯಾಗಿ ಅರ್ಥಮಾಡಿಸುತ್ತವೆ. ಪ್ರತಿಯೊಬ್ಬರಲ್ಲಿಯೂ ನೈತಿಕತೆ ಮೂಡಬೇಕೆಂಬುದು ವಚನ ಸಾಹಿತ್ಯದ ಉದ್ದೇಶ.

ಕರ್ನಾಟಕದ ಒಂದು ಭಾಗದಲ್ಲಿ ನಡೆದ ಚಳುವಳಿಯ ಬಗ್ಗೆ ಇಡೀ ವಿಶ್ವವೇ ಗಮನಹರಿಸುತ್ತದೆಂದರೆ ಅದು ಒಳಗೊಂಡಿರುವ ಪ್ರಾಮಾಣಿಕತೆ, ನೈತಿಕತೆಯೇ ಕಾರಣ. ವಚನ ಸಾಹಿತ್ಯವನ್ನು ಉಳಿಸಿ ಬೆಳೆಸುವಲ್ಲಿ ಕನ್ನಡಿಗರಾದ ನಮ್ಮೆಲ್ಲರ ಜವಾಬ್ದಾರಿ ಹೆಚ್ಚೇ ಇದೆ. ವಚನಗಳ ತತ್ವವನ್ನು ಅಳವಡಿಸಿಕೊಂಡು ಬದುಕಿದಾಗ ಅವುಗಳಿಂದ ಜೀವನವೂ ಸಾರ್ಥಕತೆ ಪಡೆಯುತ್ತದೆ. ಇದನ್ನೆಲ್ಲಾ ಅರ್ಥೈಸುವಲ್ಲಿ ದೇಜಗೌ ಅವರ ಕೃತಿಗಳು ಸಹಕಾರಿಯಾಗಿವೆ. ವಚನಸಾಹಿತ್ಯದ ಬಗೆಗೆ ದೇಜಗೌ ಅವರು ಮಾಡಿರುವ ಈ ಕೆಲಸ ನಿಜಕ್ಕೂ ಶ್ಲಾಘನೀಯವಾಗಿದೆ. ವಚನ ಸಾಹಿತ್ಯವನ್ನು ನಾವು ಮತ್ತೊಂದು ನಿಟ್ಟಿನಲ್ಲಿ ಕುರಿತು ಆಲೋಚಿಸಲು, ವಿಮರ್ಶಿಸಲು ದೇಜಗೌ ವಚನಸಾಹಿತ್ಯವನ್ನು ಕುರಿತಂತೆ ಬೇರೆ ಬೇರೆ ಆಯಾಮಗಳನ್ನು ಚರ್ಚಿಸಿರುವುದು. ದರ್ಶಿಸಿರುವುದು ಸಹಕಾರಿಯಾಗಿದೆ.

ವಚನ ಸಾಹಿತ್ಯ ಕುರಿತಾದ ದೇಜಗೌ ಅವರ ಕೃತಿಗಳನ್ನು ಅಧ್ಯಯನ ಮಾಡಿದಾಗ ದೇಜಗೌ ಅವರಲ್ಲಿರುವ ಒಬ್ಬ ಸಮಾಜವಾದಿ, ಅರ್ಥಶಾಸ್ತ್ರಜ್ಞ, ರಾಜಕೀಯ ಚಿಂತಕ, ಧಾರ್ಮಿಕ ಪ್ರಜ್ಞೆಯುಳ್ಳ ಒಬ್ಬ ಮಹಾನ್ ವ್ಯಕ್ತಿಯ ದರ್ಶನವಾಗುತ್ತದೆ. ಎಲ್ಲಾ ವಿಷಯುಗಳ ಬಗ್ಗೆ ಅವರಿಗಿರುವ ಅನುಭವ ಜ್ಞಾನವು ವಚನಕಾರರು ಹಾಗೂ ಇತರ ಮಹಾನ್ ವ್ಯಕ್ತಿಗಳ ವ್ಯಕ್ತಿತ್ವದ. ಚಿಂತನೆಗಳ ಹಿನ್ನಲೆಯಲ್ಲಿ ವ್ಯಕ್ತವಾಗಿದೆ.

ದೇಜಗೌ ಅವರ ಶ್ರೇಷ್ಠ ವ್ಯಕ್ತಿತ್ವ, ಆದರ್ಶಯುತವಾದ ಬದುಕು ನಮಗೆಲ್ಲರಿಗೂ ಆದರ್ಶವಾಗಿದೆ.

## ಕೊನೆಟಿಪ್ಪಣಿಗಳು

೧. ದೇಜಗೌ, ಬಸವದರ್ಶನ, ಮೊದಲ ಮುದ್ರಣ (೨೦೦೪), ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಪು. ೨೨೪.

೨. ಅದೇ, ಪು. ೨೪೪.

೩. ಅದೇ, ಪು. ೨೪೫.

೪. ಅದೇ, ಪು. ೨೪೬.

೫. ಅದೇ, ಪು. ೨೬೧.

೬. ಅದೇ, ಪು. ೨೬೪.

*****

## ಪರಾಮರ್ಶನ ಕೃತಿಗಳು

೧. ಅನುಭವ ಮಂಟಪ, ಡಾ. ಎಸ್.ಆರ್.ಗುಂಜಾಳ, ಪ್ರಥಮ ಮುದ್ರಣ, ೨೦೦೮, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.

೨. ಡಾ. ಅಂಬೇಡ್ಕರ್‌ರವರ ಪರಿನಿಬ್ಬಾಣ, ಎನ್.ಆರ್.ಶಿವರಾಂ, ಪ್ರಥಮ ಮುದ್ರಣ, ೨೦೧೩, ಅಶೋಕ ಪಬ್ಲಿಕೇಶನ್ಸ್, ನಗರನಹಳ್ಳಿ, ಹೊಳೇನರಸೀಪುರ(ತಾ), ಹಾಸನ(ಜಿ).

೩. ಬಸವದರ್ಶನ, ದೇಜಗೌ, ಪ್ರಥಮ ಮುದ್ರಣ (೨೦೦೪), ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.

೪. ಬುದ್ಧಧರ್ಮೀಯರ ದಿನನಿತ್ಯದ ಪೂಜಾಪಾಠಗಳು, ಡಾ. ರಾಜಾನಂದಮೂರ್ತಿ ಬೋಧ್, ಪ್ರಥಮ ಮುದ್ರಣ, ೨೦೧೦, ಬುದ್ಧ ಪ್ರತಿಷ್ಠಾನ ಪ್ರಕಾಶನ, ಬೆಂಗಳೂರು.

೫. ಭಾಷೆ ಸಾಹಿತ್ಯ ಸಂಸ್ಕೃತಿಗೆ ಪ್ರೊ. ದೇಜಗೌ ಅವರ ಕೊಡುಗೆ, ಡಾ. ಟಿ.ಕೆ.ಕೆಂಪೇಗೌಡ, ಪ್ರಥಮ ಮುದ್ರಣ, (೨೦೦೮), ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಬೆಂಗಳೂರು.

೬. ಮಾನವಧರ್ಮದ ಪ್ರತಿಪಾದಕರು, ಜಿ.ಬಂಗಾರಪ್ಪ ಹೊ.ನ.ಪುರ, ಪ್ರಥಮ ಮುದ್ರಣ–೨೦೦೪, ಚಿಂತನ ಪ್ರಕಾಶನ ಹೊಳೇನರಸೀಪುರ(ತಾ), ಹಾಸನ(ಜಿ).

೭. ವಚನಗಳಲ್ಲಿ ಸಮಾಜವಾದ, ದೇಜಗೌ, ೨೦೦೪, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.

೮. ವಚನಗಳಲ್ಲಿ ಜೀವನಮೌಲ್ಯಗಳು, ಪ್ರೊ. ಟಿ.ಆರ್.ಮಹಾದೇವಯ್ಯ, ಪ್ರಥಮ ಮುದ್ರಣ, ೨೦೧೧, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.

೯. ವಚನಕಾರ್ತಿಯರು, ಡಾ. ಎಂ.ಎಸ್.ವೇದಾ, ಪ್ರಥಮ ಮುದ್ರಣ, ೨೦೧೧, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.

೧೦. ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ. ದೇಜಗೌ, (೨೦೦೪), ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.

೧೧. ಸೋಮಸಿರಿ, ಮಲೆಯೂರು ಗುರುಸ್ವಾಮಿ (ಸಂಪಾದಕರು), ವಚನಸಾಹಿತ್ಯ : ಮೌಲ್ಯ ವಿವೇಚನೆ, ಡಾ. ಸಿ.ಪಿ.ಕೃಷ್ಣಕುಮಾರ್, ಪ್ರಥಮ ಮುದ್ರಣ, ೨೦೦೦, ಸುವರ್ಣ ಮಹೋತ್ಸವ ಸಮಿತಿ. ಶ್ರೀ ವೀರಸಿಂಹಾಸನ ಶಿಲಾಮಠ, ಸೋಮಹಳ್ಳಿ, ಗುಂಡ್ಲುಪೇಟೆ (ತಾ), ಚಾಮರಾಜನಗರ (ಜಿ).

*****

